13. ಪತ್ತಿನ ಸಹಕಾರ ಸಂಘಗಳಿಗೆ ಸಂಬಂಧಿಸಿದಂತೆ ಅಪೆಕ್ಸ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು, ಪಿಕಾರ್ಡ್ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಕಸ್ಕಾರ್ಡ್ ಬ್ಯಾಂಕಿನ ವ್ಯವಸ್ಥಾಪಕ ನಿರ್ದೇಶಕರು ಹಾಗೂ ಪಟ್ಟಣ ಸಹಕಾರ ಬ್ಯಾಂಕುಗಳಿಗೆ ಸಂಬಂಧಿಸಿದಂತೆ ಸಹಕಾರ ಸಂಘಗಳ ನಿಬಂಧಕರ ಕಚೇರಿಯಲ್ಲಿರುವ ಸಹಕಾರ ಸಂಘಗಳ ಜಂಟಿ ನಿಬಂಧಕರು (ಪಟ್ಟಣ ಬ್ಯಾಂಕುಗಳ ಶಾಖೆ) ಇವರು ಎಲ್ಲಾ ಕ್ಲೇಮು ಬಿಲ್ಲುಗಳನ್ನು ಕ್ರೋಢೀಕರಿಸಿ ಸಹಕಾರ ಸಂಘಗಳ ನಿಬಂಧಕರಿಗೆ ಸಲ್ಲಿಸತಕ್ಕದ್ದು.
14. ಸಹಕಾರ ಸಂಘಗಳ ನಿಬಂಧಕರು ಸದರಿ ಬಿಲ್ಲುಗಳನ್ನು ಪರಿಶೀಲಿಸಿ ಸಂಬಂಧಪಟ್ಟ ಸಹಕಾರ ಸಂಘ/ಸಹಕಾರ ಬ್ಯಾಂಕುಗಳಿಗೆ ಕರ್ನಾಟಕ ರಾಜ್ಯ ಸಹಕಾರಿ ಅಪೆಕ್ಸ್ ಬ್ಯಾಂಕಿನ ಮುಖಾಂತರ ಹಣ ಬಿಡುಗಡೆ ಮಾಡತಕ್ಕದ್ದು.
15. ಸಾಲ ಪಡೆಯುವ ರೈತರ ಪೈಕಿ ಹೊಸದಾಗಿ ಸಾಲ ಪಡೆಯುವ ರೈತರಿಗೆ ಆದ್ಯತೆ ನೀಡತಕ್ಕದ್ದು ಹಾಗೂ ಕನಿಷ್ಟ ಶೇ.85 ರಷ್ಟು ಸಾಲವನ್ನು ಹೊಸ ಸದಸ್ಯರಿಗೆ ವಿತರಿಸತಕ್ಕದ್ದು.
16. ವಿತರಿಸಿದ ಒಟ್ಟಾರೆ ಸಾಲದ ಶೇಕಡಾ 24.10 ರಷ್ಟು ಪರಿಶಿಷ್ಟಜಾತಿ ಮತ್ತು ಪರಿಶಿಷ್ಟಪಂಗಡದ ಸದಸ್ಯರಿಗೆ ಸಾಲ ನೀಡುವುದು ಕಡ್ಡಾಯವಾಗಿರುತ್ತದೆ.
17. ಈ ಯೋಜನೆಯಡಿ ಅನುದಾನದ ಬಿಡುಗಡೆಯು ಕರ್ನಾಟಕ ಆರ್ಥಿಕ ಸಂಹಿತೆಯ ಪರಿಚ್ಛೇದ 161(ಬಿ)(2), ಪರಿಚ್ಛೇದ 101(ಬಿ)(5)(111)ರಡಿಯ ಟಿಪ್ಪಣಿ-2 ಹಾಗೂ ಪರಿಚ್ಛೇದ 101(ಬಿ)(6)(11)ರ ಅವಕಾಶಗಳ ಪಾಲನೆಗೆ ಒಳಪಟ್ಟಿರುತ್ತದೆ.
18. ಸಹಕಾರ ಸಂಘಗಳ ನಿಬಂಧಕರು ಸಂಬಂಧಪಟ್ಟ ಪುನರ್ಭರಣ ಬಿಲ್ಲುಗಳು ಪರಿಶೀಲನೆ ಆದ ನಂತರ ದೃಢೀಕೃತ ಬಿಲ್ಲುಗಳ ಆಧಾರದ ಮೇಲೆ ಸಂಬಂಧಪಟ್ಟ ಸಂಸ್ಥೆಗಳಿಗೆ ಹಣವನ್ನು ಬಿಡುಗಡೆ ಮಾಡತಕ್ಕದ್ದು ಹಾಗೂ ಹಣದ ಉಪಯೋಗದ ಬಗ್ಗೆ ಕಾಲಕಾಲಕ್ಕೆ ಪ್ರಗತಿ ವರದಿಗಳನ್ನು ಸಲ್ಲಿಸತಕ್ಕದ್ದು ಮತ್ತು ನಿಗದಿತ ನಮೂನೆಯಲ್ಲಿ ಉಪಯೋಗ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.
19. ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸಲು ಅಗತ್ಯವಾದ ಎಲ್ಲಾ ಕ್ರಮಗಳನ್ನು ಕೈಗೊಳ್ಳತಕ್ಕದ್ದು ಮತ್ತು ಅಗತ್ಯವಾದ ಮಾರ್ಗದರ್ಶನ ಮತ್ತು ಸೂಚನೆಗಳನ್ನು ನೀಡಲು ಸಕ್ಷಮರಾಗಿರತಕ್ಕದ್ದು.
20. ಈ ಯೋಜನೆಯನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸಲು ಕಾಲಕಾಲಕ್ಕೆ ಸರ್ಕಾರ ಮತ್ತು ಸಹಕಾರ ಸಂಘಗಳ ನಿಬಂಧಕರು ನೀಡಿದ ಸೂಚನೆಗಳನ್ನು ಸಹಕಾರ ಸಂಸ್ಥೆಗಳು ಪಾಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ 309 ವೆಚ್ಚ-2/2015, ದಿನಾಂಕ:14.10.2015ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

PR. 678
SC. 100

## ಸಹಕಾರ ಸಚಿವಾಲಯ

**ವಿಷಯ:** 2015-16ನೇ ಸಾಲಿಗೆ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ: 08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಓ 184 ಸಿಎಲ್ಎಸ್ 2015, ಬೆಂಗಳೂರು, ದಿನಾಂಕ: 16.06.2015
3. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಸಿಬ್ಬಂದಿ/26/ ಇಜಿಪಿ/2015-16, ದಿನಾಂಕ: 27.07.2015.
4. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/02/ಟಿಎಫ್‌ಪಿ, ಬೆಂಗಳೂರು, ದಿನಾಂಕ: 09.04.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015-16ನೇ ಸಾಲಿನ ಮುಂದುವರೆದ ಯೋಜನೆಯಾಗಿ ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425-00-004-0-01-059ರಡಿ ರೂ.5.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2015-16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425-00-004-0-01-059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ರೂ.1.25 ಲಕ್ಷ(ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳ ಮೊದಲನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಲಾಗಿದೆ.

ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಈ ಯೋಜನೆಯಡಿ ಅವಕಾಶ ಕಲ್ಪಿಸಿರುವ ರೂ.5.00 ಲಕ್ಷಗಳಲ್ಲಿ ರೂ.1.25 ಲಕ್ಷಗಳ ಎರಡನೇ ಕಂತಿನ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ. ಮೊದಲನೇ ಕಂತಿನಲ್ಲಿ ಬಿಡುಗಡೆಯಾಗಿರುವ ರೂ.1.25 ಲಕ್ಷಗಳ ಪೈಕಿ ರೂ.1,08,927/-ಗಳನ್ನು ಖರ್ಚು ಮಾಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸಿರುತ್ತಾರೆ.

ಮೇಲೆ (4) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ 2 ಕಂತುಗಳಲ್ಲಿ ಬಿಡುಗಡೆಗೊಳಿಸಲು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ. ಅದರಂತೆ, ಈಗಾಗಲೇ ಬಿಡುಗಡೆಯಾಗಿರುವ ಮೊದಲನೇ ಕಂತಿನ ಶೇ.75 ರಷ್ಟು ಬಳಕೆಯಾಗಿದ್ದಲ್ಲಿ, 2ನೇ ಕಂತಿನ ಬಿಡುಗಡೆಗೆ ಅವಕಾಶವಿರುತ್ತದೆ.

2015–16 ನೇ ಸಾಲಿನ ಎರಡನೇ ತ್ರೈಮಾಸಿಕದಲ್ಲಿ 1/4 ಭಾಗ ಅಂದರೆ ರೂ.1.25 ಲಕ್ಷಗಳನ್ನು ಬಿಡುಗಡೆ ಮಾಡಲು ಅವಕಾಶವಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಒ 184 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:28.09.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ 2425–00–004–0–01–059 ತಂತ್ರಜ್ಞಾನ ಮತ್ತು ಮಾನವ ಸಂಪನ್ಮೂಲ ಉನ್ನತೀಕರಣ ನಿಧಿ ಯೋಜನೆಯಡಿ ಎರಡನೇ ಕಂತಿನ ಅನುದಾನ ರೂ.1.25 ಲಕ್ಷ(ಒಂದು ಲಕ್ಷದ ಇಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ:09.04.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 101 ಆಂಆಸ 2015, ದಿನಾಂಕ:21.09.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 624**

**SC. 25**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಡಿ ಅನುದಾನ ಬಿಡುಗಡೆ ಕುರಿತು ಆದೇಶ.

**ಓದಲಾಗಿದೆ:**

1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಆಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸರ್ಕಾರದ ಆದೇಶ ಸಂಖ್ಯೆ:ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ: 12.06.2015.
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/02/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.04.2015.
4. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಎಸ್‌ವಿಒ/09/2015–16, ದಿನಾಂಕ:16.09.2015.

**ಪ್ರಸ್ತಾವನೆ:**

ಮೇಲೆ ಓದಲಾದ (1) ರ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–001–0–01–125 ಆಧುನೀಕರಣ ರಡಿ ರೂ.15.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ ಓದಲಾದ (2) ರ ಸರ್ಕಾರಿ ಆದೇಶದಲ್ಲಿ ಈ ಯೋಜನೆಯಡಿ ಮೊದಲನೇ ತ್ರೈಮಾಸಿಕದಲ್ಲಿ ರೂ.3.75 ಲಕ್ಷಗಳನ್ನು ಬಿಡುಗಡೆ ಮಾಡಿ ಆದೇಶಿಸಲಾಗಿರುತ್ತದೆ.

ಮೇಲೆ ಓದಲಾದ (3) ರ ಸರ್ಕಾರಿ ಆದೇಶದಲ್ಲಿ ಹಿಂದಿನ ಕಂತುಗಳಲ್ಲಿ ಬಿಡುಗಡೆ ಮಾಡಿದ ಅನುದಾನದ ಶೇ.75 ರಷ್ಟು ಅನುದಾನ ಬಳಕೆಯಾಗಿದ್ದಲ್ಲಿ, ಯೊಜನೆಯ ವಾರ್ಷಿಕ ಒಟ್ಟು ಅವಕಾಶದ ಶೇ.25 ರಷ್ಟನ್ನು 2ನೇ ಕಂತಿನಲ್ಲಿ ಬಿಡುಗಡೆಗೊಳಿಸಲು ಅವಕಾಶವಿರುತ್ತದೆ.

ಮೇಲೆ ಓದಲಾದ (4) ರ ಪತ್ರದಲ್ಲಿ ಸಹಕಾರ ಸಂಘಗಳ ನಿಬಂಧಕರು ಬಿಡುಗಡೆಯಾಗಿರುವ ಮೊದಲನೇ ಕಂತಿನ ಅನುದಾನ ರೂ.3.75 ಲಕ್ಷಗಳಲ್ಲಿ ರೂ.3.70 ಲಕ್ಷಗಳನ್ನು ಉಪಯೋಗಿಸಿಕೊಂಡಿರುವುದಾಗಿ ಬಳಕೆ ಪ್ರಮಾಣ ಪತ್ರವನ್ನು ಸರ್ಕಾರಕ್ಕೆ ಸಲ್ಲಿಸಿ 2ನೇ ಕಂತಿನ ಅನುದಾನ ರೂ.3.75 ಲಕ್ಷಗಳನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ:–

**ಸರ್ಕಾರದ ಆದೇಶ ಸಂಖ್ಯೆ:ಸಿಒ 185 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:30.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16ನೇ ಸಾಲಿನ ಯೋಜನಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಲೆಕ್ಕ ಶೀರ್ಷಿಕೆ 2425–00–001–0–01 ನಿರ್ದೇಶನ ಮತ್ತು ಆಡಳಿತ–125–ಆಧುನೀಕರಣ ಯೋಜನೆಯಲ್ಲಿ ಲಭ್ಯವಿರುವ ಅನುದಾನದಲ್ಲಿ ಎರಡನೇ ತ್ರೈಮಾಸಿಕದಲ್ಲಿ ರೂ.3.75 ಲಕ್ಷ (ಮೂರು ಲಕ್ಷದ ಎಪ್ಪತ್ತೈದು ಸಾವಿರ ರೂಪಾಯಿಗಳು ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಈ ಹಣವನ್ನು ಸಹಕಾರ ಸಂಘಗಳ ಜಂಟಿ ನಿಬಂಧಕರು (ಆಡಳಿತ ಮತ್ತು ಅಭಿವೃದ್ಧಿ), ನಿಬಂಧಕರ ಕಛೇರಿ, ಬೆಂಗಳೂರು ಇವರು ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿಯೊಂದಿಗೆ ಡ್ರಾ ಮಾಡಲು ಅಧಿಕಾರ ನೀಡಲಾಗಿದೆ. ಈ ಬಗ್ಗೆ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ:09.04.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 107 ಆಂಆಸ 2015, ದಿನಾಂಕ:14.10.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 677**

**SC. 25**

## ಸಹಕಾರ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಸ್ವಸಹಾಯ ಗುಂಪುಗಳ ಸಾಲದ ಮೇಲಿನ ಬಡ್ಡಿ ಸಹಾಯಧನ ಯೋಜನೆಯಡಿಯಲ್ಲಿ ಅನುದಾನ ಬಿಡುಗಡೆ ಮಾಡುವ ಕುರಿತು ಆದೇಶ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:ಸಇ 22 ಅಂಆಸ 2015, ಬೆಂಗಳೂರು, ದಿನಾಂಕ:08.05.2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂ:ಸಿಆರ್‌ಡಿ/ ಕೆಎಂಈ/4/37/2015–16, ದಿನಾಂಕ:05.06.2015 & ಪತ್ರ ಸಂ:ಸಿಆರ್‌ಡಿ/ಕೆಎಂಈ–8/1/2015–16, ದಿ:16.09.2015.
3. ಸರ್ಕಾರದ ಆದೇಶ ಸಂಖ್ಯೆ:ಎಫ್‌ಡಿ/02/ಟಿಎಫ್‌ಪಿ/2015, ಬೆಂಗಳೂರು, ದಿನಾಂಕ:09.04.2015.

**ಪ್ರಸ್ತಾವನೆ:**

ಮೇಲೆ (1) ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ 2015–16ನೇ ಸಾಲಿನ ಮುಂದುವರೆದ ಯೋಜನೆಯಾದ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯನ್ನು ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಒಟ್ಟು ರೂ.8600.00 ಲಕ್ಷಗಳ ಯೋಜನೆ ಕಾರ್ಯಕ್ರಮವನ್ನು ದಿನಾಂಕ:01.04.2015 ರಿಂದ 31.03.2016 ರವರೆಗೆ ಮುಂದುವರೆಸಲು ಸರ್ಕಾರದ ಅನುಮೋದನೆ ನೀಡಲಾಗಿದೆ.

ಮೇಲೆ (2) ರಲ್ಲಿ ಓದಲಾದ ಪತ್ರಗಳಲ್ಲಿ ಸಹಕಾರ ಸಂಘಗಳ ನಿಬಂಧಕರು 2015–16ನೇ ಸಾಲಿನ ಆಯವ್ಯಯದಲ್ಲಿ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ಕಲ್ಪಿಸಿರುವ ರೂ.8600.00 ಲಕ್ಷಗಳಲ್ಲಿ 1/4 ಭಾಗದ ರೂ.2150.00 ಲಕ್ಷಗಳ ಅನುದಾನವನ್ನು ಬಿಡುಗಡೆ ಮಾಡುವಂತೆ ಕೋರಿರುತ್ತಾರೆ.

ಮೇಲೆ (3) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಆಯವ್ಯಯ ಅವಕಾಶದ ಶೇ.50 ಅನುದಾನವನ್ನು 2 ತ್ರೈಮಾಸಿಕ ಕಂತುಗಳಲ್ಲಿ ಬಿಡುಗಡೆಗೊಳಿಸಲು ಬಳಕೆ ಪ್ರಮಾಣ ಪತ್ರ ಒದಗಿಸುವ ಷರತ್ತಿಗೊಳಪಟ್ಟು ಇಲಾಖೆಯ ಪ್ರಧಾನ ಕಾರ್ಯದರ್ಶಿ/ಕಾರ್ಯದರ್ಶಿಗಳಿಗೆ ವಿತ್ತಾಧಿಕಾರ ಪ್ರತ್ಯಾಯೋಜಿಸಲಾಗಿರುತ್ತದೆ.

ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ:

**ಸರ್ಕಾರದ ಆದೇಶ ಸಂಖ್ಯೆ:ಸಿಒ 202 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:28.09.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2015–16 ನೇ ಸಾಲಿನಲ್ಲಿ ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ ಯೋಜನೆಯಲ್ಲಿ ಲೆಕ್ಕ ಶೀರ್ಷಿಕೆ 2425–00–107–2–41 ರಡಿ ರೂ.2150.00 ಲಕ್ಷ (ಎರಡು ಸಾವಿರದ ನೂರ ಐವತ್ತು ಲಕ್ಷ ರೂಪಾಯಿಗಳು ಮಾತ್ರ) ಗಳನ್ನು ಮೊದಲನೇ ತ್ರೈಮಾಸಿಕದಲ್ಲಿ ಕೆಳಕಂಡಂತೆ ಬಿಡುಗಡೆ ಮಾಡಿ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶಿಸಿದೆ.

**ಯೋಜನೆ:** ಸ್ವಸಹಾಯ ಗುಂಪುಗಳಿಗೆ ಬಡ್ಡಿ ಸಹಾಯಧನ

**ಲೆಕ್ಕಶೀರ್ಷಿಕೆ:** 2425–00–107–2–41 (ರೂ.ಲಕ್ಷಗಳಲ್ಲಿ)

| | |
|---|---|
| 106–ಸಾಮಾನ್ಯ | 1962.75 |
| 422–ವಿಶೇಷ ಘಟಕ ಯೋಜನೆ | 98.75 |
| 423–ಗಿರಿಜನ ಉಪ ಯೋಜನೆ | 88.50 |
| **ಒಟ್ಟು** | **2150.00** |

ಈ ಮೊತ್ತವನ್ನು ಸಹಕಾರ ಸಂಘಗಳ ಅಪರ ನಿಬಂಧಕರು (ಪತ್ತು), ಸಹಕಾರ ಸಂಘಗಳ ನಿಬಂಧಕರ ಕಛೇರಿ, ಬೆಂಗಳೂರು ಇವರು ಹಣ ಸಂದಾಯ ರಸೀದಿ ಮೂಲಕ ಸಹಕಾರ ಸಂಘಗಳ ನಿಬಂಧಕರ ಮೇಲು ಸಹಿ ಪಡೆದು ಖಜಾನೆಯಿಂದ ಪಡೆಯತಕ್ಕದ್ದು. ಖಜಾನೆಯಿಂದ ಡ್ರಾ ಮಾಡಿದ ಮೊತ್ತವನ್ನು ಕರ್ನಾಟಕ ರಾಜ್ಯ ಸಹಕಾರ ಅಪೆಕ್ಸ್ ಬ್ಯಾಂಕ್ ನಿ., ಬೆಂಗಳೂರು ಇಲ್ಲಿ ಠೇವಣಿಸಿ, ಸಹಕಾರ ಸಂಘಗಳ ನಿಬಂಧಕರು ಸದರಿ ಹಣವನ್ನು ಸಂಬಂಧಿಸಿದ ಬ್ಯಾಂಕುಗಳಿಗೆ ಬಿಡುಗಡೆ ಮಾಡುವುದು ಮತ್ತು ಈ ಹಣವನ್ನು ಸಂಬಂಧಿಸಿದ ಫಲಾನುಭವಿಗಳ ಖಾತೆಗೆ ಕೂಡಲೇ ಬಿಡುಗಡೆ ಮಾಡಿ, ಈ ಬಗ್ಗೆ ಬಳಕೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ:ಎಫ್‌ಡಿ 2 ಟಿಎಫ್‌ಪಿ 2015, ದಿನಾಂಕ:09.04.2015ರಲ್ಲಿ ಸರ್ಕಾರದ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿರುವ ಅಧಿಕಾರದನ್ವಯ ಹಾಗೂ ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ:ಸಇ 102 ಅಂಆಸ 2015, ದಿನಾಂಕ:23.09.2015 ರಲ್ಲಿ ನೀಡಿರುವ ಅನುಮೋದನೆ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

PR. 640
SC. 25

## ಸಹಕಾರ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2014–15ನೇ ಸಾಲಿಗೆ ಶಾಸನಬದ್ಧ ಲೆಕ್ಕ ಪರಿಶೋಧಕರ ನೇಮಕಾತಿ ಬಗ್ಗೆ.

**ಓದಲಾಗಿದೆ:**
1. ಆದೇಶ ಸಂಖ್ಯೆ: ಸಇ 55 ರಾಉನಿ 2014, ದಿನಾಂಕ: 26.12.2014.
2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರ ಸಂ: KSWC/ACT/APP/SA'S/22/2005-06/1154/2015-16, ದಿನಾಂಕ: 15.06.2015.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ 2013-14ನೇ ಸಾಲಿಗೆ ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್, ಬೆಂಗಳೂರು ಇವರನ್ನು ನೇಮಕ ಮಾಡಲಾಗಿದೆ.

ಮೇಲೆ (2)ರಲ್ಲಿ ಓದಲಾದ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರಾಜ್ಯ ಉಗ್ರಾಣ ನಿಗಮ ಇವರ ಪತ್ರದಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾ ಲೆಕ್ಕಪರಿಶೋಧಕರ ಹಿರಿಯ ಆಡಳಿತಾಧಿಕಾರಿಗಳು ದಿನಾಂಕ: 04.08.2014ರಂದು ಪತ್ರ ಬರೆದು ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್ ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2014-15ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ನೇಮಕ ಮಾಡಲು/ಮರು ನೇಮಕ ಮಾಡುವಂತೆ ಸಲಹೆ ಮಾಡಿರುತ್ತಾರೆ.

ಆದ್ದರಿಂದ 2014-15ನೇ ಸಾಲಿಗೆ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್, ಬೆಂಗಳೂರು ಇವರನ್ನು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಮರು ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 55 ರಾಉನಿ 2014, ಬೆಂಗಳೂರು, ದಿನಾಂಕ: 31.07.2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನವದೆಹಲಿಯ ಲೆಕ್ಕನಿಯಂತ್ರಕರು ಮತ್ತು ಮಹಾಲೆಕ್ಕಪರಿಶೋಧಕರ ಹಿರಿಯ ಆಡಳಿತಾಧಿಕಾರಿಗಳ ಪತ್ರ ದಿನಾಂಕ: 04.08.2014 ರಲ್ಲಿ ವಿಧಿಸಿರುವ ಷರತ್ತಿಗೊಳಪಟ್ಟು ಕರ್ನಾಟಕ ರಾಜ್ಯ ಉಗ್ರಾಣ ನಿಗಮಕ್ಕೆ 2014-15ನೇ ಸಾಲಿಗೆ ಶಾಸನಬದ್ಧ ಲೆಕ್ಕಪರಿಶೋಧಕರನ್ನಾಗಿ ಶ್ರೀ ಪಿ.ಚಂದ್ರಶೇಖರ್, ಚಾರ್ಟರ್ಡ್ ಅಕೌಂಟೆಂಟ್ (ಬಿ.ಎ.ಓ 219) ಎಸ್ 512-514, ಮಣಿಪಾಲ್ ಸೆಂಟರ್, ಸಂಖ್ಯೆ: 47, ಡಿಕನ್ ಸನ್ ರಸ್ತೆ, ಬೆಂಗಳೂರು-42 ಇವರನ್ನು ಮರು ನೇಮಕ ಮಾಡಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಬಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ-2,
ಸಹಕಾರ ಇಲಾಖೆ.

PR. 654

## ಸಹಕಾರ ಸಚಿವಾಲಯ

**ವಿಷಯ:** 2015-16ನೇ ಸಾಲಿಗೆ ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಗೆ ಆಹಾರ ಧಾನ್ಯಗಳ ಶುದ್ಧೀಕರಣ ಮತ್ತು ವರ್ಗೀಕರಣಕ್ಕಾಗಿ (Cleaning & Grading) ಯಂತ್ರೋಪಕರಣ ಪೂರೈಕೆ ಯೋಜನೆಗೆ ಆಡಳಿತಾತ್ಮಕ ಅನುಮೋದನೆ ನೀಡಿ ಆದೇಶ.

**ಓದಲಾಗಿದೆ:**
1. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಸಿಆರ್‌ಡಿ/ಕೆಎಂಸಿ/8/2015-16, ದಿನಾಂಕ:10.04.2015.
2. ಸಹಕಾರ ಸಂಘಗಳ ನಿಬಂಧಕರ ಪತ್ರ ಸಂಖ್ಯೆ:ಆರ್‌ಸಿಎಸ್/ ಸಿಆರ್‌ಡಿ/ಕೆಎಂಸಿಇ/8/2015-16, ದಿನಾಂಕ: 28.04.2015.

**ಪ್ರಸ್ತಾವನೆ:**

ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಶುದ್ಧೀಕರಣ ಮತ್ತು ವರ್ಗೀಕರಣ (Cleaning & Grading) ಯಂತ್ರೋಪಕರಣಗಳನ್ನು ಖರೀದಿಸಲು ಹಾಗೂ ಉತ್ತಮ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲು 2015-16ನೇ ಸಾಲಿನಲ್ಲಿ ರೂ.300.00 ಲಕ್ಷಗಳನ್ನು ಒದಗಿಸಲಾಗುವುದೆಂದು ಆಯವ್ಯಯ ಭಾಷಣದಲ್ಲಿ ಘೋಷಿಸಲಾಗಿರುತ್ತದೆ.

ಮೇಲೆ (1) ಮತ್ತು (2) ರಲ್ಲಿ ಓದಲಾದ ಸಹಕಾರ ಸಂಘಗಳ ನಿಬಂಧಕರ ಪತ್ರಗಳಲ್ಲಿ 2015-16ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಶುದ್ಧೀಕರಣ ಮತ್ತು ವರ್ಗೀಕರಣ (Cleaning & Grading) ಯಂತ್ರೋಪಕರಣಗಳನ್ನು ಖರೀದಿಸಲು ಹಾಗೂ ಉತ್ತಮ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲು 2015-16ನೇ ಸಾಲಿನಲ್ಲಿ ರೂ.300.00 ಲಕ್ಷಗಳನ್ನು ಒದಗಿಸಿರುವುದರಿಂದ ಯೋಜನೆ ಅನುಷ್ಠಾನಕ್ಕಾಗಿ ಮಾನದಂಡಗಳನ್ನು ತಯಾರಿಸಿ ಆಡಳಿತಾತ್ಮಕ ಆದೇಶ ಹೊರಡಿಸಬೇಕೆಂದು ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಒ 145 ಸಿಎಲ್‌ಎಸ್ 2015, ಬೆಂಗಳೂರು, ದಿನಾಂಕ:08.10.2015**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ಶುದ್ಧೀಕರಣ ಮತ್ತು ವರ್ಗೀಕರಣ (Cleaning & Grading) ಯಂತ್ರೋಪಕರಣಗಳನ್ನು ಖರೀದಿಸಲು ಹಾಗೂ ಉತ್ತಮ ಮಾರುಕಟ್ಟೆ ವ್ಯವಸ್ಥೆಯನ್ನು ಕಲ್ಪಿಸಲು ಆಯವ್ಯಯ "ಲೆಕ್ಕ ಶೀರ್ಷಿಕೆ 2425-00-001-0-01" ರಲ್ಲಿ ಒದಗಿಸಲಾಗಿರುವ ರೂ.300.00 ಲಕ್ಷಗಳಲ್ಲಿ ಯೋಜನೆಯನ್ನು ಈ ಆದೇಶಕ್ಕೆ ಲಗತ್ತಿಸಿರುವ ಷರತ್ತು/ಮಾನದಂಡಗಳನ್ವಯ ಸಹಕಾರ ಸಂಘಗಳ ನಿಬಂಧಕರು ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಲಾಗಿದೆ.

ಈ ಆದೇಶವನ್ನು ಯೋಜನಾ ಇಲಾಖೆ ಟಿಪ್ಪಣಿ ಸಂಖ್ಯೆ:ಪಿಡಿ 30 ಎಫ್‌ಆರ್‌ಓ 2015, ದಿನಾಂಕ:26.09.2015 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ:ಆಇ 178 ವೆಚ್ಚ 2/2015, ದಿನಾಂಕ:20.06.2015 ರಲ್ಲಿ ನೀಡಿರುವ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ
**ಎಂ. ವೆಂಕಟಸ್ವಾಮಿ**
ವಿಶೇಷ ಕರ್ತವ್ಯಾಧಿಕಾರಿ ಹಾಗೂ
ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,
ಸಹಕಾರ ಇಲಾಖೆ.

**ಅನುಬಂಧ**

**(ಸರ್ಕಾರದ ಆದೇಶ ಸಂಖ್ಯೆ:ಸಿಒ 145 ಸಿಎಲ್ಎಸ್ 2015, ದಿನಾಂಕ: 08.10.2015)**

2015–16ನೇ ಆರ್ಥಿಕ ವರ್ಷದಲ್ಲಿ ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಗೆ ಆಹಾರ ಧಾನ್ಯಗಳನ್ನು ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳನ್ನು ಪೂರೈಸುವ ಸಂಬಂಧ ಯೋಜನೆಯನ್ನು ಅನುಷ್ಠಾನಗೊಳಿಸುವ ನಿಟ್ಟಿನಲ್ಲಿ ಸರ್ಕಾರವು ರೂ.3.00 ಕೋಟಿಗಳನ್ನು ನಿಗದಿಪಡಿಸಿದೆ.

ಈ ಯೋಜನೆಯಡಿ ಇಲಾಖೆಗೆ ಒದಗಿಸಲಾಗಿರುವ ಅನುದಾನದಲ್ಲಿ ಆಯ್ದ ಪ್ರಾಥಮಿಕ ಕೃಷಿ ಸಹಕಾರ ಸಂಘಗಳಿಗೆ ಯಂತ್ರೋಪಕರಣಗಳನ್ನು ಖರೀದಿ ಮಾಡಲು ಆಯವ್ಯಯ ನೀಡಲಾಗುವುದು.

ರೈತರು ಬೆಳೆದ ಉತ್ಪನ್ನಗಳಿಗೆ ಸೂಕ್ತ ಬೆಲೆಯನ್ನು ಒದಗಿಸುವ ಸಲುವಾಗಿ ಗ್ರಾಮೀಣ ಮಟ್ಟದಲ್ಲಿ ರೈತರ ಜಮೀನಿನ ಸಮೀಪದಲ್ಲೇ ರೈತರ ಉತ್ಪನ್ನಗಳನ್ನು ಶುದ್ಧೀಕರಣ ಮತ್ತು ವರ್ಗೀಕರಣ ಮಾಡುವ ಸಲುವಾಗಿ ಕ್ಲೀನಿಂಗ್ ಮತ್ತು ಗ್ರೇಡಿಂಗ್ ಯಂತ್ರೋಪಕರಣಗಳನ್ನು ಕೃಷಿ ಚಟುವಟಿಕೆಗಳಲ್ಲಿ ತೊಡಗಿರುವ ಸಹಕಾರ ಸಂಘಗಳಿಗೆ ಅಂದರೆ, ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಗಳು, ಕಾಫಿ, ಏಲಕ್ಕಿ, ಅಡಿಕೆ ಬೆಳೆಗಾರರ ಸಹಕಾರ ಸಂಘಗಳು, ಎಣ್ಣೆಬೀಜ ಬೆಳೆಗಾರರ ಸಹಕಾರ ಸಂಘಗಳು, ತಮ್ಮ ರೈತ ಸದಸ್ಯರು ಬೆಳೆಯುವ ಉತ್ಪನ್ನಗಳಾದ ಭತ್ತ, ರಾಗಿ, ಜೋಳ, ಮೆಕ್ಕೆಜೋಳ, ಎಣ್ಣೆ ಕಾಳುಗಳು, ಕಾಫಿ, ಏಲಕ್ಕಿ, ಅಡಿಕೆ ಹಾಗೂ ಇತ್ಯಾದಿ ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣಕ್ಕಾಗಿ ಸಣ್ಣ ಪ್ರಮಾಣದ ಯಂತ್ರೋಪಕರಣಗಳನ್ನು ಖರೀದಿಸಲು ಯಂತ್ರೋಪಕರಣಗಳ ಬೆಲೆ ಮತ್ತು ಅವುಗಳ ಅಳವಡಿಕೆಗೆ ಸೇರಿದಂತೆ ಒಟ್ಟು ವೆಚ್ಚದ ಶೇ.50ರಷ್ಟು ಅನುದಾನವನ್ನು ಒದಗಿಸುವುದು.

ಸಹಕಾರ ಸಂಘಗಳು ಈ ಯೋಜನೆಯಲ್ಲಿ ಪಡೆದ ಯಂತ್ರೋಪಕರಣಗಳನ್ನು ಸದಸ್ಯರಿಗೆ ಕಡಿಮೆ ಬಾಡಿಗೆ ದರದಲ್ಲಿ ಈ ಯಂತ್ರಗಳ ಸವಲತ್ತುಗಳನ್ನು ಒದಗಿಸುವುದು. ಈ ಯಂತ್ರೋಪಕರಣ ಬಾಡಿಗೆ ದರವನ್ನು ಜಿಲ್ಲಾ ಮಟ್ಟದಲ್ಲಿ ನಿರ್ಧರಿಸಲು ಈ ಕೆಳಕಂಡ ಅಧಿಕಾರಿಗಳನ್ನೊಳಗೊಂಡ ಸಮಿತಿಯನ್ನು ರಚಿಸಿ, ಅದರಲ್ಲಿ ಅನುಮೋದನೆ ಪಡೆದ ದರದಲ್ಲಿಯೂ ನಿರ್ಧರಿಸಲು ಕೆಳಕಂಡ ಸಮಿತಿ ಸದಸ್ಯರನ್ನು ಒಳಗೊಂಡಿರತಕ್ಕದ್ದು.

1. ಜಂಟಿ ನಿರ್ದೇಶಕರು, ಕೃಷಿ ಇಲಾಖೆ,
2. ಜಿಲ್ಲಾ ಸಹಕಾರ ಸಂಘಗಳ ಉಪನಿಬಂಧಕರು
3. ತಾಲ್ಲೂಕಿನ ಮಾರುಕಟ್ಟೆ ಸಮಿತಿಯ ಕಾರ್ಯದರ್ಶಿಗಳು

ಮೇಲಿನ ಸಮಿತಿಯು ನಿರ್ಧರಿಸಿದ ದರದಲ್ಲಿ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡದ ಸದಸ್ಯರು ಬೆಳೆಯುವ ಉತ್ಪನ್ನಗಳಿಗೆ ಉಚಿತವಾಗಿ ಹಾಗೂ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಶೇ.50 ರಷ್ಟು ರಿಯಾಯಿತಿಯನ್ನು ನೀಡಬಹುದಾಗಿದೆ.

**ಸಂಘಗಳ ಆಯ್ಕೆಯ ವಿಧಾನ:–**

1. ಆಯ್ಕೆ ಮಾಡುವ ಪ್ರಾಥಮಿಕ ಸಂಘವು ಪರಿಣಾಮಕಾರಿಯಾಗಿ ತನ್ನ ಕಾರ್ಯಚಟುವಟಿಕೆಗಳನ್ನು ನಿರ್ವಹಿಸುತ್ತಿದ್ದು, ಚಾಲ್ತಿ ಸಬಲತೆ (current viability) ಹೊಂದಿ ಲಾಭದಲ್ಲಿರಬೇಕು.
2. ಪ್ರಾಥಮಿಕ ಸಂಘವನ್ನು ಸಂಘದ ಯಶಸ್ವಿ ನಿರ್ವಹಣೆಯ ಆದ್ಯತಾ ಮೇರೆಗೆ ಆಯ್ಕೆ ಮಾಡಬೇಕಾಗುತ್ತದೆ.
3. ಫಲಾನುಭವಿ ಪ್ರಾಥಮಿಕ ಸಂಘವನ್ನು ಜಿಲ್ಲಾ ಉಪ ನಿಬಂಧಕರು ಜಿಲ್ಲಾ ಬ್ಯಾಂಕಿನ ಮುಖ್ಯಕಾರ್ಯನಿರ್ವಹಣಾಧಿಕಾರಿಯೊಂದಿಗೆ ಸಮಾಲೋಚಿಸಿ ಆಯ್ಕೆ ಮಾಡಬೇಕು.

ಸಂಘಗಳು ಯಂತ್ರೋಪಕರಣಗಳನ್ನು ಅಳವಡಿಸಲು ಸ್ಥಳಾವಕಾಶ ಹಾಗೂ ಮೂಲಭೂತ ಸೌಲಭ್ಯಗಳನ್ನು ಹೊಂದಿರಬೇಕು. ಪ್ರಾಥಮಿಕ ಸಂಘಗಳೂ ತಮ್ಮ ನಿರ್ವಹಣಾ ವೆಚ್ಚ ಹಾಗೂ ಸಿಬ್ಬಂದಿ ವೆಚ್ಚವನ್ನು ಬಾಡಿಗೆ ಆದಾಯದಲ್ಲಿ ಭರಿಸಿಕೊಳ್ಳತಕ್ಕದ್ದು.

ಪ್ರಾಥಮಿಕ ಕೃಷಿ ಸಹಕಾರ ಸಂಘಗಳು ರೈತರು ಬೆಳೆದ ದವಸಧಾನ್ಯಗಳನ್ನು/ಕೃಷಿ ಉತ್ಪನ್ನಗಳನ್ನು ಶುದ್ಧೀಕರಣ ಮತ್ತು ವರ್ಗೀಕರಣ ಮಾಡಲು ಈ ಯೋಜನೆಯ ಮೂಲಕ ರೈತರಿಗೆ ಸೇವಾ ಮನೋಭಾವದಿಂದ ಬಾಡಿಗೆ ನೀಡುವುದು ಮತ್ತು ಇದರಿಂದ ಬರುವ ಬಾಡಿಗೆಯನ್ನು ಈ ಯಂತ್ರೋಪಕರಣಗಳ ಹಾಗೂ ಸಿಬ್ಬಂದಿಗಳ ನಿರ್ವಹಣೆಗೆ ವೆಚ್ಚ ಮಾಡತಕ್ಕದ್ದು.

ಮೇಲೆ ತಿಳಿಸಿದ ರೈತರು ಬೆಳೆದ ಕೃಷಿ ಉತ್ಪನ್ನಗಳ ಶುದ್ಧೀಕರಣ ಮತ್ತು ವರ್ಗೀಕರಣ ಯಂತ್ರೋಪಕರಣಗಳನ್ನು ಖರೀದಿಸಿ ನೀಡುವ ಯೋಜನೆ ಇದಾಗಿದ್ದು ಈ ಯಂತ್ರಗಳನ್ನು ರಾಜ್ಯ ಮಟ್ಟದಲ್ಲಿ ಸಹಕಾರ ಸಂಘಗಳ ನಿಬಂಧಕರು, ಕೃಷಿ ನಿರ್ದೇಶಕರನ್ನೊಳಗೊಂಡ ಖರೀದಿ ಸಮಿತಿ ರಚಿಸಿ ಆ ಸಮಿತಿಯು ರಾಜ್ಯದಲ್ಲಿರುವ ಎಲ್ಲಾ ಜಿಲ್ಲೆಗಳಲ್ಲಿ ಅಗತ್ಯವಿರುವ ಈ ಯೋಜನೆಯಲ್ಲಿ ತಿಳಿಸಿರುವ ಯಂತ್ರೋಪಕರಣಗಳ ಖರೀದಿಯನ್ನು ನಿರ್ಧರಿಸತಕ್ಕದ್ದು.

ಯಂತ್ರಗಳ ಖರೀದಿಗೆ ಶೇ.50 ರಷ್ಟು ಸಹಾಯಧನ ಮತ್ತು ಸಂಘವು ಶೇ.50 ರಷ್ಟು ಮೊತ್ತವನ್ನು ತೊಡಗಿಸತಕ್ಕದ್ದು. ಪ್ರತಿ ಘಟಕಕ್ಕೆ ಗರಿಷ್ಠ ರೂ.3.00 ಲಕ್ಷಗಳ ಮಿತಿಯೊಳಗೆ ಸಹಾಯಧನ ಲಭ್ಯತೆ ನಿಗದಿಪಡಿಸಬಹುದಾಗಿದೆ.

ಈ ಯೋಜನೆ ಸೂಕ್ತ ಅನುಷ್ಠಾನಕ್ಕಾಗಿ ಅಗತ್ಯ ಸಲಹೆ/ಸೂಚನೆಗಳನ್ನು ಸಹಕಾರ ಸಂಘಗಳ ನಿಬಂಧಕರು ನೀಡತಕ್ಕದ್ದು.

ಸದರಿ ಯೋಜನೆಯನ್ನು 2015–16ನೇ ಸಾಲಿನ ಆಯವ್ಯಯದ ಮಿತಿಯೊಳಗೊಳಪಡಿಸಿ ಜಾರಿಗೊಳಿಸತಕ್ಕದ್ದು.

**ಎಂ. ವೆಂಕಟಸ್ವಾಮಿ**

ವಿಶೇಷ ಕರ್ತವ್ಯಾಧಿಕಾರಿ ಹಾಗೂ

ಪದನಿಮಿತ್ತ ಸರ್ಕಾರದ ಉಪ ಕಾರ್ಯದರ್ಶಿ,

ಸಹಕಾರ ಇಲಾಖೆ.

**PR. 653**

**SC. 50**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯ ಡಾ॥ ಡಿ.ಕೆ. ಪ್ರಭುರಾಜ್, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ಶಾಶ್ವತವಾಗಿ ವಿಲೀನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿ ಸಂಖ್ಯೆ: CM/27455/TRF–2/15 ದಿನಾಂಕ:01.06.2015.
2. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ದಿನಾಂಕ:26.12.2011 ಸಂಖ್ಯೆ: ಕೆಎಸ್‌ಆರ್‌ಎಸ್‌ಎಸಿ/77/ ಸಿ&ಆರ್–2011 ರ ಸಾಮಾನ್ಯ ನೇಮಕಾತಿ ನಿಯಮಗಳು.
3. ದಿನಾಂಕ:08.09.2015 ಸಂಖ್ಯೆ:ತೋಇ 165 ರೇಕೃವಿ 2015ರ ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆ (ರೇಷ್ಮೆ) ಯ ಅನಧಿಕೃತ ಟಿಪ್ಪಣಿ.

**ಪ್ರಸ್ತಾವನೆ:**

ಡಾ॥ ಡಿ.ಕೆ. ಪ್ರಭುರಾಜ್, ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯಲ್ಲಿ ವಿಜ್ಞಾನಿಯಾಗಿ ಕಾರ್ಯನಿರ್ವಹಿಸುತ್ತಿದ್ದು, ಇವರು ಪ್ರಸ್ತುತ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರು ಹುದ್ದೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿದ್ದಾರೆ. ಸದರಿಯವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿಯೇ ವಿಲೀನಗೊಳಿಸಲು ಮೇಲೆ (1)ರಲ್ಲಿ ಓದಲಾದ ಮಾನ್ಯ ಮುಖ್ಯಮಂತ್ರಿಯವರ ಟಿಪ್ಪಣಿಯಲ್ಲಿ ಸೂಚಿಸಲಾಗಿದೆ.

2. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ 2011ರ ಸಾಮಾನ್ಯ ನೇಮಕಾತಿ ನಿಯಮಾವಳಿಯ ನಿಯಮ (6)ರಲ್ಲಿ ಈ ಸಂಸ್ಥೆಯಲ್ಲಿ ನಿಯೋಜನೆ ಮೇಲೆ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳ ಸೇವೆಯನ್ನು ಅವರು ಇಚ್ಛೆಯನ್ನು ವ್ಯಕ್ತಪಡಿಸಿದ್ದಲ್ಲಿ, ಹಾಗೂ ನಿಗಧಿಪಡಿಸಿದ ವಿದ್ಯಾರ್ಹತೆಯು ತೃಪ್ತಿಕರವಾಗಿದ್ದಲ್ಲಿ, ಅಂತಹ ಅಧಿಕಾರಿಗಳ ಸೇವೆಯನ್ನು ಸಂಸ್ಥೆಯಲ್ಲಿ ವಿಲೀನಗೊಳಿಸಲು ಮೇಲೆ (2)ರಲ್ಲಿ ಓದಲಾದ ಆದೇಶದಲ್ಲಿ ಅವಕಾಶ ಕಲ್ಪಿಸಲಾಗಿದೆ.

3. ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿ ನಿಯೋಜನೆಯ ಮೇಲೆ ನಿರ್ದೇಶಕರಾಗಿ ಕಾರ್ಯನಿರ್ವಹಿಸುತ್ತಿರುವ ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯ ಡಾ॥ ಡಿ.ಕೆ. ಪ್ರಭುರಾಜ್, ಇವರ ಸೇವೆಯನ್ನು ಶಾಶ್ವತವಾಗಿ ವಿಲೀನಗೊಳಿಸಲು ಸದರಿಯವರ ನೇಮಕಾತಿ ಪ್ರಾಧಿಕಾರವಾದ ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯ ಮೇಲೆ (3)ರಲ್ಲಿ ಓದಲಾದ ಅನಧಿಕೃತ ಟಿಪ್ಪಣಿಯಲ್ಲಿ ಸಹಮತಿಯನ್ನು ನೀಡಿದೆ.

4. ಮೇಲಿನ ಪ್ರಸ್ತಾವನೆಯನ್ನು ಮೇಲೆ (2)ರಲ್ಲಿ ಓದಲಾದ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಸಾಮಾನ್ಯ ನೇಮಕಾತಿ ನಿಯಮಗಳ ನಿಯಮ (6) ರಂತೆ ಕೂಲಂಕಷವಾಗಿ ಪರಿಶೀಲಿಸಿದೆ. ಮೇಲೆ ಓದಲಾದ (2)ರಲ್ಲಿ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಸಾಮಾನ್ಯ ನೇಮಕಾತಿ ನಿಯಮಗಳ ಶೆಡ್ಯೂಲ್ 1(b)ರಲ್ಲಿ ನಿರ್ದೇಶಕರ ಹುದ್ದೆಗೆ ಈ ಕೆಳಕಂಡಂತೆ ನೇಮಕ ವಿಧಾನ, ಕನಿಷ್ಟ ವಿದ್ಯಾರ್ಹತೆ ಹಾಗೂ ಸೇವಾನುಭವವನ್ನು ಕೆಳಕಂಡಂತೆ ನಿಗಧಿಗೊಳಿಸಿದೆ.

| Mode of Recruitment | Minimum Qualifications/Experience |
|---|---|
| Deputation of Scientist from GoI Institutions or State Government Institutions or by Promotion by selection on the basis of merit cum seniority. | Ph D in any branch of Engineering / Agriculture / Soil / Geology / Forestry / Environment with first class in Master's Degree from premier National Level Institution and 15 years of service in a State or National level organization in a senior technical / scientist position after obtaining Ph.D degree and out of which the last 5 years of experience should be in Remote Sensing and GIS applications. |

ಡಾ. ಡಿ.ಕೆ. ಪ್ರಭುರಾಜ್‌ರವರು ಮೇಲ್ಕಾಣಿಸಿದಂತೆ ನಿಗದಿಪಡಿಸಲಾದ ಅರ್ಹತೆ ಹಾಗೂ ಅನುಭವಗಳನ್ನು ಹೊಂದಿರುತ್ತಾರೆ. ಅದರಂತೆ ಈ ಕೆಳಗಿನ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 14 ಡಿಐಎಸ್ 2015, ಬೆಂಗಳೂರು, ದಿನಾಂಕ:26–09–2015**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ರೇಷ್ಮೆ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯಿಂದ ನಿಯೋಜನೆ ಮೇಲೆ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ನಿರ್ದೇಶಕರ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿರುವ ಡಾ॥ ಡಿ.ಕೆ. ಪ್ರಭುರಾಜ್, ಇವರ ಸೇವೆಯನ್ನು ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದ ಸಾಮಾನ್ಯ ನೇಮಕಾತಿ ನಿಯಮ (6) ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಕರ್ನಾಟಕ ರಾಜ್ಯ ದೂರ ಸಂವೇದಿ ಅನ್ವಯಿಕ ಕೇಂದ್ರದಲ್ಲಿಯೇ ತಕ್ಷಣದಿಂದಲೇ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಶಾಶ್ವತವಾಗಿ ವಿಲೀನಗೊಳಿಸಲು ಅನುಮತಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ
**ಎನ್.ಆರ್. ಪ್ರಭು**
ಸರ್ಕಾರದ ಉಪ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**PR. 598**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯಲ್ಲಿನ 10.04 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ವಿಶೇಷ ಆರ್ಥಿಕ ವಲಯ ಘಟಕವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 03 ಪಿಆರ್‌ಎಂ 2014 ದಿ:3.03.2014.

2. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: KBITS/SWC/7/2015-16/140 ದಿ:11.09.2015.

3. ದಿನಾಂಕ:29.08.2015ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಉನ್ನತ ಮಟ್ಟದ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯನ್ನು ರಚಿಸಲು ಹಾಗೂ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಯನ್ನು ನೋಡೆಲ್ ಏಜೆನ್ಸಿಯಾಗಿ ನೇಮಿಸಿ ಬಂಡವಾಳ ಹೂಡಿಕೆ ದಾರರಿಗೆ / ಉದ್ದಿಮೆದಾರರಿಗೆ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಮಾರ್ಗದರ್ಶಿಯಾಗಿ ಸೇವೆಯನ್ನು ಒದಗಿಸಿ ಅನುಕೂಲ ಕಲ್ಪಿಸಿಕೊಡಲು ಮೇಲೆ ಓದಲಾದ (1)ರಲ್ಲಿ ಆದೇಶವನ್ನು ಹೊರಡಿಸಲಾಗಿದೆ.

2) ದಿನಾಂಕ:29.08.2015 ರಂದು ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ಸಭೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯು ಎಲೆಕ್ಟ್ರಾನಿಕ್ ಸಿಟಿಯಲ್ಲಿನ 10.04 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ವಿಶೇಷ ಆರ್ಥಿಕ ವಲಯ ಘಟಕವನ್ನು ಸ್ಥಾಪಿಸಲು ಉದ್ದೇಶಿಸಿದ್ದು, ಸದರಿ ಸಂಸ್ಥೆಯವರು ಈ ಕೆಳಕಂಡ ಕೋರಿಕೆಯನ್ನು ರಾಜ್ಯ ಉನ್ನತ ಮಟ್ಟದ ಸಮಿತಿಯ ಮುಂದೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಮೆ. ಇನ್‌ಫೋಸಿಸ್ ಸಂಸ್ಥೆ, ಬೆಂಗಳೂರು ಇವರ ಸಲ್ಲಿಸಿರುವ ಪ್ರಸ್ತಾವನೆಗೆ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿ ಸಭೆಯ ತೀರ್ಮಾನದಂತೆ ಹಾಗೂ ಅನುಮೋದನೆಯಂತೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ರವರು ಕೋರಿರುತ್ತಾರೆ.

| ಹಿನ್ನೆಲೆ | ಪ್ರೈವೇಟ್ ಲಿಮಿಟೆಡ್ ಕಂಪನಿ |
|---|---|
| ಉತ್ಪನ್ನ / ಚಟುವಟಿಕೆ | ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಸೇವೆಗಳಿಗೆ ಆಧಾರಿತ ಸೇವೆಗಳಿಗೆ ವಿಶೇಷ ಆರ್ಥಿಕ ವಲಯದ ಘಟಕವನ್ನು (SEZ) ಸ್ಥಾಪಿಸುವುದು. |
| ಭೂಮಿಯ ಅಳತೆ | 10.04 ಎಕರೆ ಸ್ವಂತ ಜಮೀನು. |
| ಸ್ಥಳ | ಕೋನಪ್ಪನ ಅಗ್ರಹಾರ, ಗ್ರಾಮ ಪಂಚಾಯ್ತಿ ಮತ್ತು ದೊಡ್ಡತೋಗೂರು ಗ್ರಾಮ ಪಂಚಾಯ್ತಿ, ಎಲೆಕ್ಟ್ರಾನಿಕ್ ಸಿಟಿ, ಹಂತ-1, ಹೊಸೂರು ರಸ್ತೆ, ಬೆಂಗಳೂರು-560100. |
| ಹಣ ಹೂಡಿಕೆ | ರೂ.625.00 ಕೋಟಿಗಳು |
| ಉದ್ಯೋಗ | 8500 ಜನ |
| ಪ್ರವರ್ತಕರು | ಮೆ. ಇನ್‌ಫೋಸಿಸ್ ಲಿಮಿಟೆಡ್ ಕಂಪನಿ |

3) ಮೇಲೆ (3)ರಲ್ಲಿ ಓದಲಾದ ರಾಜ್ಯ ಉನ್ನತ ಮಟ್ಟದ ಸಮಿತಿಯ ತೀರ್ಮಾನದಂತೆ ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 19 ಎಂಡಿಎ 2015 (1) ಬೆಂಗಳೂರು, ದಿನಾಂಕ:29-09-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯು ಕೋನಪ್ಪನ ಅಗ್ರಹಾರ, ಗ್ರಾಮ ಪಂಚಾಯ್ತಿ ಮತ್ತು ದೊಡ್ಡತೋಗೂರು ಗ್ರಾಮ ಪಂಚಾಯ್ತಿ, ಎಲೆಕ್ಟ್ರಾನಿಕ್ ಸಿಟಿ, ಹಂತ-1, ಹೊಸೂರು ರಸ್ತೆ, ಬೆಂಗಳೂರು ಇಲ್ಲಿ 10.04 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ವಿಶೇಷ ಆರ್ಥಿಕ ವಲಯ ಘಟಕವನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

| ವಿಷಯಗಳು | ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ನಿರ್ಧಾರ |
|---|---|
| ಭೂ ಅವಶ್ಯಕತೆ | ಕಟ್ಟಡ ಜಾಗವಾಗಿ 1,06,060.62 ಚ.ಮೀಟರ್‌ಗಳನ್ನು ಎಲೆಕ್ಟ್ರಾನಿಕ್ ಸಿಟಿಯಲ್ಲಿನ 10.04 ಎಕರೆಯ ಸ್ವಂತ ಜಮೀನಿನಲ್ಲಿ ನಿರ್ಮಿಸುವುದು. |
| ನೀರು | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (BWSSB) ಮೂಲಕ 5 ಲಕ್ಷ ಲೀಟರ್. |
| ವಿದ್ಯುಚ್ಛಕ್ತಿ | 5000 ಕೆವಿಎ ಅನ್ನು ಬೆಸ್ಕಾಂ ಮೂಲಕ ಪಡೆಯುವುದು. |
| ಮಾಲಿನ್ಯ ನಿಯಂತ್ರಣ ಒಪ್ಪಿಗೆ | ಪ್ರವರ್ತಕರು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪರವಾನಗಿಯನ್ನು ಪಡೆಯಬೇಕಾಗಿರುತ್ತದೆ. ಅಂತೆಯೇ ಅವಶ್ಯಕವಾಗಿದ್ದಲ್ಲಿ ಅರಣ್ಯ ಹಾಗೂ ನಿಸರ್ಗ ಮಂತ್ರಾಲಯದಿಂದ ಅಥವಾ ಭಾರತ ಸರ್ಕಾರ ಅಥವಾ ಕರ್ನಾಟಕ ಸರ್ಕಾರದ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ 'ಪರಿಸರ ಒಪ್ಪಿಗೆ' (ಇ.ಸಿ) ಪಡೆದುಕೊಳ್ಳಲು ಸೂಚಿಸಲಾಗಿದೆ. |
| ಪ್ರೋತ್ಸಾಹಕಗಳು ಹಾಗೂ ರಿಯಾಯಿತಿಗಳು | ರಾಜ್ಯದ ಐಟಿ (ಐ4) ನೀತಿಯಂತೆ, ಯೋಜನೆಯನ್ನು ಬೃಹತ್ ಯೋಜನೆ ಎಂದು ವರ್ಗೀಕರಿಸತಕ್ಕದ್ದು. |

| | |
|---|---|
| ಶಾಸನಬದ್ಧ ಪರವಾನಗಿಗಳು | ಪ್ರವರ್ತಕರುಗಳು ಅವಶ್ಯ ಶಾಸನಬದ್ಧ ಪರವಾನಗಿಗಳನ್ನು /ನಿರಾಕ್ಷೇಪಣ ಪತ್ರಗಳನ್ನು ಸಂಬಂಧಿಸಿದ ಇಲಾಖೆಗಳು / ಪ್ರಾಧಿಕಾರಗಳಿಂದ ಪಡೆಯುವುದು |
| ಸ್ಥಳೀಯ ಜನತೆಗೆ ಉದ್ಯೋಗ | ಡಾ: ಸರೋಜಿನಿ ಮಹಿಷಿ ವರದಿ ಹಾಗೂ ರಾಜ್ಯದ ಹೊಸ ಕೈಗಾರಿಕಾ ನೀತಿಯಂತೆ ಪ್ರವರ್ತಕರುಗಳು ಸ್ಥಳೀಯರಿಗೆ ಯೋಜನೆಗಳಲ್ಲಿ ಉದ್ಯೋಗ ಕಲ್ಪಿಸಿಕೊಡುವುದು. |

ಅ) ಯೋಜನೆ ಪ್ರತಿಪಾದಕರು ಮಳೆನೀರು ಕೊಯಿಲು, ತ್ಯಾಜ್ಯ ನೀರು ಪುನರ್ಬಳಕೆ ಹಾಗೂ ನೀರು ಸಂರಕ್ಷಣೆ ಸೌಲಭ್ಯಗಳನ್ನು ಅಳವಡಿತಕ್ಕದ್ದು. ಎಲ್ಲೆಲ್ಲಿ ಅವಶ್ಯವೋ ಅಲ್ಲಿ ಶೂನ್ಯ ತ್ಯಾಜ್ಯ ಸೌಲಭ್ಯವನ್ನು ಅಳವಡಿಸತಕ್ಕದ್ದು.

ಆ) ಹೂಡಿಕೆದಾರರು ಅವಶ್ಯವಾದ ಕಾನೂನಾತ್ಮಕ ಶಾಸನಬದ್ಧ ಒಪ್ಪಿಗೆಗಳನ್ನು ಮತ್ತು ಯೋಜನೆಗಳಿಗೆ ಸಂಬಂಧಪಟ್ಟ ಇಲಾಖೆಗಳಿಂದ ಹಾಗೂ ಸಕ್ಷಮ ಪ್ರಾಧಿಕಾರಗಳಿಂದ ನಿರಾಕ್ಷೇಪಣ ಪತ್ರವನ್ನು ಯೋಜನೆ ಅನುಷ್ಠಾನಗೊಳಿಸುವ ಮುನ್ನವೇ ಪಡೆಯತಕ್ಕದ್ದು.

ಇ) ಯೋಜನೆ ಪ್ರವರ್ತಕರು ಡಾ: ಸರೋಜಿನಿ ಮಹಿಷಿ ವರದಿಯಂತೆ ಹಾಗೂ ರಾಜ್ಯ ಸರ್ಕಾರದ ತತ್ಸಂಬಂಧ ನೀತಿಗಳಂತೆ ಸ್ಥಳೀಯ ಜನತೆಗೆ ತರಬೇತಿ ಮತ್ತು ಉದ್ಯೋಗ ಒದಗಿಸಲು ಮಾನವ ಸಂಪನ್ಮೂಲ ಅಭಿವೃದ್ಧಿಯ ಒಂದು ರೂಪುರೇಷೆಯನ್ನು ರಚಿಸಿ ಒದಗಿಸತಕ್ಕದ್ದು.

ಈ) ಎಲ್ಲೆಲ್ಲಿ ಕೆ.ಐ.ಎ.ಡಿ.ಬಿ. ಮೂಲಕ ಭೂ–ಸ್ವಾಧೀನ ಪ್ರಸ್ತಾಪವಿದೆಯೋ ಅಲ್ಲಿ, ಯೋಜನೆಯ ಪ್ರತಿಪಾದಕರು ಭೂಮಿಯನ್ನು ಕಳೆದುಕೊಳ್ಳುವ ಪ್ರತೀ ಕುಟುಂಬದ ಕನಿಷ್ಠ ಒಬ್ಬ ಸದಸ್ಯರಿಗೆ ಉದ್ಯೋಗ ನೀಡತಕ್ಕದ್ದು.

ಉ) ಎಲ್ಲೆಲ್ಲಿ ಯೋಜನೆಗೆ ಸ್ಥಳೀಯ ಮಾರಾಟಗಾರರಿಗೆ ಉತ್ತೇಜನದ ಅವಕಾಶವಿದೆಯೋ, ಅಲ್ಲಿ ಕಂಪನಿಯು ಮಾರಾಟ ಅಭಿವೃದ್ಧಿ ರೂಪುರೇಷೆ ರಚಿಸಿ, ಸ್ಥಳೀಯ ಮಾರಾಟಗಾರರುಗಳನ್ನು (VENDOR) ಉತ್ತೇಜಿಸಿ ಅವಶ್ಯವಾದ ಪರಿಕರಗಳು, ಉಪಕರಣಗಳು ಹಾಗೂ ಉಪಜೋಡಣೆಗಳನ್ನು ಈ ಸ್ಥಳೀಯ ಮಾರಾಟಗಾರರುಗಳಿಂದ ಖರೀದಿಸುವುದು.

ಊ) ಯೋಜನೆಯು ಅನುಮೋದನೆಗೊಂಡ ದಿನಾಂಕದಿಂದ 2 ವರ್ಷಗಳೊಳಗೆ ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**PR. 620**

**SC. 50**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯ ಹಂತ–2, ಬೆಂಗಳೂರಿನ 3.5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 03 ಪಿಆರ್‌ಎಂ 2014 ದಿ:3.03.2014.
2. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: KBITS/SWC/7/2015–16/140 ದಿ:11.09.2015.
3. ದಿನಾಂಕ:29.08.2015ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಉನ್ನತ ಮಟ್ಟದ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯನ್ನು ರಚಿಸಲು ಹಾಗೂ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಯನ್ನು ನೋಡೆಲ್ ಏಜೆನ್ಸಿಯಾಗಿ ನೇಮಿಸಿ ಬಂಡವಾಳ ಹೂಡಿಕೆ ದಾರರಿಗೆ / ಉದ್ದಿಮೆದಾರರಿಗೆ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಮಾರ್ಗದರ್ಶಿಯಾಗಿ ಸೇವೆಯನ್ನು ಒದಗಿಸಿ ಅನುಕೂಲ ಕಲ್ಪಿಸಿಕೊಡಲು ಮೇಲೆ ಓದಲಾದ (1)ರಲ್ಲಿ ಆದೇಶ ಹೊರಡಿಸಲಾಗಿದೆ.

2) ದಿನಾಂಕ:29.08.2015 ರಂದು ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ಸಭೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯ ಹಂತ–2, ಬೆಂಗಳೂರಿನ 3.5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಉದ್ದೇಶಿಸಿದ್ದು, ಸದರಿ ಸಂಸ್ಥೆಯವರು ಈ ಕೆಳಕಂಡ ಕೋರಿಕೆಯನ್ನು ರಾಜ್ಯ ಉನ್ನತ ಮಟ್ಟದ ಸಮಿತಿಯ ಮುಂದೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಮೆ. ಇನ್‌ಫೋಸಿಸ್ ಸಂಸ್ಥೆ, ಬೆಂಗಳೂರು ಇವರ ಸಲ್ಲಿಸಿರುವ ಪ್ರಸ್ತಾವನೆಗೆ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿ ಸಭೆಯ ತೀರ್ಮಾನದಂತೆ ಹಾಗೂ ಅನುಮೋದನೆಯಂತೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ರವರು ಕೋರಿರುತ್ತಾರೆ.

| **ಹಿನ್ನೆಲೆ** | **ಪ್ರೈವೇಟ್ ಲಿಮಿಟೆಡ್ ಕಂಪನಿ** |
|---|---|
| ಉತ್ಪನ್ನ / ಚಟುವಟಿಕೆ | ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನಕ್ಕೆ ಸಂಬಂಧಿಸಿದಂತೆ ಸೇವೆಗಳ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕಕ್ಕೆ ಎಲೆಕ್ಟ್ರಾನಿಕ್ ಸಿಟಿ, ಹಂತ–2, ಬೆಂಗಳೂರು ಇಲ್ಲಿ ಹೊಸ ಕಟ್ಟಡದ ನಿರ್ಮಾಣ. |
| ಭೂಮಿಯ ಅಳತೆ | 3.5 ಎಕರೆ ಸ್ವಂತ ಜಮೀನು. |

| | |
|---|---|
| ಸ್ಥಳ | ಎಲೆಕ್ಟ್ರಾನಿಕ್ ಸಿಟಿ, ಘಟಕ–2, ಹೊಸೂರು ರಸ್ತೆ, ಬೆಂಗಳೂರು–560100. |
| ಹಣ ಹೂಡಿಕೆ | ರೂ.214.00 ಕೋಟಿಗಳು. |
| ಉದ್ಯೋಗ | 3500 ಜನ. |
| ಪ್ರವರ್ತಕರು | ಮೆ. ಇನ್‌ಫೋಸಿಸ್ ಲಿಮಿಟೆಡ್ ಕಂಪನಿ. |

3) ಮೇಲೆ (3)ರಲ್ಲಿ ಓದಲಾದ ರಾಜ್ಯ ಉನ್ನತ ಮಟ್ಟದ ಸಮಿತಿಯ ತೀರ್ಮಾನದಂತೆ ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 19 ಎಂಡಿಎ 2015 (2) ಬೆಂಗಳೂರು, ದಿನಾಂಕ:29–09–2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯು ಎಲೆಕ್ಟ್ರಾನಿಕ್ ಸಿಟಿ, ಘಟಕ–2, ಹೊಸೂರು ರಸ್ತೆ, ಬೆಂಗಳೂರು ಇಲ್ಲಿ 3.5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

| ವಿಷಯಗಳು | ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ನಿರ್ಧಾರ |
|---|---|
| ಭೂ ಅವಶ್ಯಕತೆ | ಕಟ್ಟಡ ಜಾಗವಾಗಿ 5,26,250 ಚ.ಮೀಟರ್‌ಗಳನ್ನು ಎಲೆಕ್ಟ್ರಾನಿಕ್ ಸಿಟಿಯಲ್ಲಿನ 3.5 ಎಕರೆಯ ಸ್ವಂತ ಜಮೀನಿನಲ್ಲಿ ನಿರ್ಮಿಸುವುದು. |
| ನೀರು | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (BWSSB) ಮೂಲಕ 2.5 ಲಕ್ಷ ಲೀಟರ್ ನೀರು / ದಿನಕ್ಕೆ. |
| ವಿದ್ಯುಚ್ಛಕ್ತಿ | 1500 ಕೆವಿಎ ಅನ್ನು ಬೆಸ್ಕಾಂ ಮೂಲಕ ಪಡೆಯುವುದು. |
| ಮಾಲಿನ್ಯ ನಿಯಂತ್ರಣ ಒಪ್ಪಿಗೆ | ಪ್ರವರ್ತಕರು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪರವಾನಗಿಯನ್ನು ಪಡೆಯಬೇಕಾಗಿರುತ್ತದೆ. ಅಂತೆಯೇ ಅವಶ್ಯಕವಾಗಿದ್ದಲ್ಲಿ ಅರಣ್ಯ ಹಾಗೂ ನಿಸರ್ಗ ಮಂತ್ರಾಲಯದಿಂದ ಅಥವಾ ಭಾರತ ಸರ್ಕಾರ ಅಥವಾ ಕರ್ನಾಟಕ ಸರ್ಕಾರದ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ 'ಪರಿಸರ ಒಪ್ಪಿಗೆ' (ಇ.ಸಿ) ಪಡೆದುಕೊಳ್ಳಲು ಸೂಚಿಸಲಾಗಿದೆ. |
| ಪ್ರೋತ್ಸಾಹಕಗಳು ಹಾಗೂ ರಿಯಾಯಿತಿಗಳು | ರಾಜ್ಯದ ಐಟಿ (ಐ4) ನೀತಿಯಂತೆ ಪರಿಗಣಿಸಲಾಗುವುದು. |
| ಶಾಸನಬದ್ಧ ಪರವಾನಗಿಗಳು | ಪ್ರವರ್ತಕರುಗಳು ಅವಶ್ಯ ಶಾಸನಬದ್ಧ ಪರವಾನಗಿಗಳನ್ನು /ನಿರಾಕ್ಷೇಪಣ ಪತ್ರಗಳನ್ನು ಸಂಬಂಧಿಸಿದ ಇಲಾಖೆಗಳು / ಪ್ರಾಧಿಕಾರಗಳಿಂದ ಪಡೆಯುವುದು. |
| ಸ್ಥಳೀಯ ಜನತೆಗೆ ಉದ್ಯೋಗ | ಡಾ: ಸರೋಜಿನಿ ಮಹಿಷಿ ವರದಿ ಹಾಗೂ ರಾಜ್ಯದ ಹೊಸ ಕೈಗಾರಿಕಾ ನೀತಿಯಂತೆ ಪ್ರವರ್ತಕರುಗಳು ಸ್ಥಳೀಯರಿಗೆ ಯೋಜನೆಗಳಲ್ಲಿ ಉದ್ಯೋಗ ಕಲ್ಪಿಸಿಕೊಡುವುದು. |

ಅ) ಯೋಜನೆ ಪ್ರತಿಪಾದಕರು ಮಳೆನೀರು ಕೊಯಿಲು, ತ್ಯಾಜ್ಯ ನೀರು ಪುನರ್ಬಳಕೆ ಹಾಗೂ ನೀರು ಸಂರಕ್ಷಣೆ ಸೌಲಭ್ಯಗಳನ್ನು ಅಳವಡಿತಕ್ಕದ್ದು. ಎಲ್ಲೆಲ್ಲಿ ಅವಶ್ಯವೋ ಅಲ್ಲಿ ಶೂನ್ಯ ತ್ಯಾಜ್ಯ ಸೌಲಭ್ಯವನ್ನು ಅಳವಡಿಸತಕ್ಕದ್ದು.

ಆ) ಹೂಡಿಕೆದಾರರು ಅವಶ್ಯವಾದ ಕಾನೂನಾತ್ಮಕ ಶಾಸನಬದ್ಧ ಒಪ್ಪಿಗೆಗಳನ್ನು ಮತ್ತು ಯೋಜನೆಗಳಿಗೆ ಸಂಬಂಧಪಟ್ಟ ಇಲಾಖೆಗಳಿಂದ ಹಾಗೂ ಸಕ್ಷಮ ಪ್ರಾಧಿಕಾರಗಳಿಂದ ನಿರಾಕ್ಷೇಪಣ ಪತ್ರವನ್ನು ಯೋಜನೆ ಅನುಷ್ಠಾನಗೊಳಿಸುವ ಮುನ್ನವೇ ಪಡೆಯತಕ್ಕದ್ದು.

ಇ) ಯೋಜನೆ ಪ್ರವರ್ತಕರು ಡಾ: ಸರೋಜಿನಿ ಮಹಿಷಿ ವರದಿಯಂತೆ ಹಾಗೂ ರಾಜ್ಯ ಸರ್ಕಾರದ ತತ್ಸಂಬಂಧ ನೀತಿಗಳಂತೆ ಸ್ಥಳೀಯ ಜನತೆಗೆ ತರಬೇತಿ ಮತ್ತು ಉದ್ಯೋಗ ಒದಗಿಸಲು ಮಾನವ ಸಂಪನ್ಮೂಲ ಅಭಿವೃದ್ಧಿಯ ಒಂದು ರೂಪುರೇಷೆಯನ್ನು ರಚಿಸಿ ಒದಗಿಸತಕ್ಕದ್ದು.

ಈ) ಎಲ್ಲೆಲ್ಲಿ ಕೆ.ಐ.ಎ.ಡಿ.ಬಿ. ಮೂಲಕ ಭೂ–ಸ್ವಾಧೀನ ಪ್ರಸ್ತಾಪವಿದೆಯೋ ಅಲ್ಲಿ, ಯೋಜನೆಯ ಪ್ರತಿಪಾದಕರು ಭೂಮಿಯನ್ನು ಕಳೆದುಕೊಳ್ಳುವ ಪ್ರತೀ ಕುಟುಂಬದ ಕನಿಷ್ಠ ಒಬ್ಬ ಸದಸ್ಯರಿಗೆ ಉದ್ಯೋಗ ನೀಡತಕ್ಕದ್ದು.

ಉ) ಎಲ್ಲೆಲ್ಲಿ ಯೋಜನೆಗೆ ಸ್ಥಳೀಯ ಮಾರಾಟಗಾರರಿಗೆ ಉತ್ತೇಜನದ ಅವಕಾಶವಿದೆಯೋ, ಅಲ್ಲಿ ಕಂಪನಿಯು ಮಾರಾಟ ಅಭಿವೃದ್ಧಿ ರೂಪುರೇಷೆ ರಚಿಸಿ, ಸ್ಥಳೀಯ ಮಾರಾಟಗಾರರುಗಳನ್ನು (VENDOR) ಉತ್ತೇಜಿಸಿ ಅವಶ್ಯವಾದ ಪರಿಕರಗಳು, ಉಪಕರಣಗಳು ಹಾಗೂ ಉಪಜೋಡಣೆಗಳನ್ನು ಈ ಸ್ಥಳೀಯ ಮಾರಾಟಗಾರರುಗಳಿಂದ ಖರೀದಿಸುವುದು.

ಊ) ಯೋಜನೆಯು ಅನುಮೋದನೆಗೊಂಡ ದಿನಾಂಕದಿಂದ 2 ವರ್ಷಗಳೊಳಗೆ ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ

ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**PR. 619**

**SC. 50**

## ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಸಚಿವಾಲಯ

**ವಿಷಯ:** ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯ ಹಂತ-1, ಬೆಂಗಳೂರಿನ 5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಆಧಾರಿತ ಸೇವೆಗಳಿಗೆ, ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಆಡಳಿತಾತ್ಮಕ ಅನುಮೋದನೆ ನೀಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಐಟಿಡಿ 03 ಪಿಆರ್‌ಎಂ 2014 ದಿ:3.03.2014.
2. ನಿರ್ದೇಶಕರು, ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯ ಇವರ ಪತ್ರ ಸಂಖ್ಯೆ: KBITS/SWC/7/2015-16/140 ದಿ:11.09.2015.
3. ದಿನಾಂಕ:29.08.2015ರಂದು ಮಾನ್ಯ ಮುಖ್ಯಮಂತ್ರಿಗಳ ಅಧ್ಯಕ್ಷತೆಯಲ್ಲಿ ನಡೆದ ರಾಜ್ಯ ಉನ್ನತ ಮಟ್ಟದ ಸಮಿತಿಯ ಸಭೆಯ ನಡವಳಿಗಳು.

**ಪ್ರಸ್ತಾವನೆ:**

ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ನೀಡಿಕೆ ಸಮಿತಿಯನ್ನು ರಚಿಸಲು ಹಾಗೂ ಕರ್ನಾಟಕ ಜೈವಿಕ ತಂತ್ರಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಸೇವೆಗಳು ಸಂಸ್ಥೆಯನ್ನು ನೋಡೆಲ್ ಏಜೆನ್ಸಿಯಾಗಿ ನೇಮಿಸಿ ಬಂಡವಾಳ ಹೂಡಿಕೆ ದಾರರಿಗೆ / ಉದ್ದಿಮೆದಾರರಿಗೆ ಯೋಜನೆಗಳನ್ನು ತ್ವರಿತವಾಗಿ ಅನುಷ್ಠಾನಗೊಳಿಸಲು ಮಾರ್ಗದರ್ಶಿಯಾಗಿ ಸೇವೆಯನ್ನು ಒದಗಿಸಿ ಅನುಕೂಲ ಕಲ್ಪಿಸಿಕೊಡಲು ಮೇಲೆ ಓದಲಾದ (1)ರಲ್ಲಿ ಆದೇಶ ಹೊರಡಿಸಲಾಗಿದೆ.

2) ದಿನಾಂಕ:29.08.2015 ರಂದು ನಡೆದ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ಸಭೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯ ಹಂತ-1, ಬೆಂಗಳೂರಿನ 5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಆಧಾರಿತ ಸೇವೆಗಳಿಗೆ, ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಉದ್ದೇಶಿಸಿದ್ದು, ಸದರಿ ಸಂಸ್ಥೆಯವರು ಈ ಕೆಳಕಂಡ ಕೋರಿಕೆಯನ್ನು ರಾಜ್ಯ ಉನ್ನತ ಮಟ್ಟದ ಸಮಿತಿಯ ಮುಂದೆ ಸಲ್ಲಿಸಿರುತ್ತಾರೆ ಎಂದು ತಿಳಿಸುತ್ತಾ, ಮೆ. ಇನ್‌ಫೋಸಿಸ್ ಸಂಸ್ಥೆ, ಬೆಂಗಳೂರು ಇವರ ಸಲ್ಲಿಸಿರುವ ಪ್ರಸ್ತಾವನೆಗೆ ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿ ಸಭೆಯ ತೀರ್ಮಾನದಂತೆ ಹಾಗೂ ಅನುಮೋದನೆಯಂತೆ ಸೂಕ್ತ ಸರ್ಕಾರಿ ಆದೇಶವನ್ನು ಹೊರಡಿಸಲು ಮೇಲೆ ಓದಲಾದ (2)ರ ಪತ್ರದಲ್ಲಿ ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ ನಿರ್ದೇಶನಾಲಯದ ನಿರ್ದೇಶಕರು ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕೆಬಿಟ್ಸ್ ರವರು ಕೋರಿರುತ್ತಾರೆ.

| ಹಿನ್ನೆಲೆ | ಪ್ರೈವೇಟ್ ಲಿಮಿಟೆಡ್ ಕಂಪನಿ |
|---|---|
| ಉತ್ಪನ್ನ / ಚಟುವಟಿಕೆ | ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನಕ್ಕೆ ಸಂಬಂಧಿಸಿದ ಸೇವೆಗಳ ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕಕ್ಕೆ ಎಲೆಕ್ಟ್ರಾನಿಕ್ ಸಿಟಿ, ಹಂತ-1, ಬೆಂಗಳೂರು ಇಲ್ಲಿ ಹೊಸ ಕಟ್ಟಡದ ನಿರ್ಮಾಣ. |
| ಭೂಮಿಯ ಅಳತೆ | 5 ಎಕರೆ ಸ್ವಂತ ಜಮೀನು. |
| ಸ್ಥಳ | ಎಲೆಕ್ಟ್ರಾನಿಕ್ ಸಿಟಿ, ಹಂತ-1, ಹೊಸೂರು ರಸ್ತೆ, ಬೆಂಗಳೂರು-560100. |
| ಹಣ ಹೂಡಿಕೆ | ರೂ.1,079 ಕೋಟಿಗಳು. |
| ಉದ್ಯೋಗ | 15000 ಜನ. |
| ಪ್ರವರ್ತಕರು | ಮೆ. ಇನ್‌ಫೋಸಿಸ್ ಲಿಮಿಟೆಡ್ ಕಂಪನಿ. |

3) ಮೇಲೆ (3)ರಲ್ಲಿ ಓದಲಾದ ರಾಜ್ಯ ಉನ್ನತ ಮಟ್ಟದ ಸಮಿತಿಯ ತೀರ್ಮಾನದಂತೆ ಈ ಬಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ ಐಟಿಡಿ 19 ಎಂಡಿಎ 2015 (3) ಬೆಂಗಳೂರು, ದಿನಾಂಕ:29-09-2015.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಮೆ. ಇನ್‌ಫೋಸಿಸ್ ಸಂಸ್ಥೆಯ ಎಲೆಕ್ಟ್ರಾನಿಕ್ ಸಿಟಿಯ ಹಂತ-1, ಬೆಂಗಳೂರಿನ 5 ಎಕರೆ ಇನ್‌ಫೋಸಿಸ್ ಸಂಸ್ಥೆಯ ಜಮೀನಿನಲ್ಲಿ ಮಾಹಿತಿ ತಂತ್ರಜ್ಞಾನ / ಮಾಹಿತಿ ತಂತ್ರಜ್ಞಾನ ಆಧಾರಿತ ಸೇವೆಗಳಿಗೆ, ಸಾಫ್ಟ್‌ವೇರ್ ತಂತ್ರಜ್ಞಾನ ಪಾರ್ಕ್ (STP) ವಿಸ್ತರಣ ಘಟಕವನ್ನು ಸ್ಥಾಪಿಸಲು ಈ ಕೆಳಕಂಡ ಷರತ್ತುಗಳಿಗೊಳಪಟ್ಟು ಆಡಳಿತಾತ್ಮಕ ಮಂಜೂರಾತಿ ನೀಡಿದೆ.

| ವಿಷಯಗಳು | ರಾಜ್ಯ ಉನ್ನತ ಮಟ್ಟದ ಒಪ್ಪಿಗೆ ಸಮಿತಿಯ ನಿರ್ಧಾರ |
|---|---|
| ಭೂ ಅವಶ್ಯಕತೆ | ಕಟ್ಟಡ ಜಾಗವಾಗಿ 25,00,000 ಚ.ಮೀಟರ್‌ಗಳನ್ನು ಎಲೆಕ್ಟ್ರಾನಿಕ್ ಸಿಟಿಯಲ್ಲಿನ 5 ಎಕರೆಯ ಸ್ವಂತ ಜಮೀನಿನಲ್ಲಿ ನಿರ್ಮಿಸುವುದು. |
| ನೀರು | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿ (BWSSB) ಮೂಲಕ 10 ಲಕ್ಷ ಲೀಟರ್. |
| ವಿದ್ಯುಚ್ಛಕ್ತಿ | 10,000 ಕೆವಿಎ ಅನ್ನು ಬೆಸ್ಕಾಂ ಮೂಲಕ ಪಡೆಯುವುದು. |
| ಮಾಲಿನ್ಯ ನಿಯಂತ್ರಣ ಒಪ್ಪಿಗೆ | ಪ್ರವರ್ತಕರು ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಪರವಾನಗಿಯನ್ನು ಪಡೆಯಬೇಕಾಗಿರುತ್ತದೆ. ಅಂತೆಯೇ ಅವಶ್ಯಕವಾಗಿದ್ದಲ್ಲಿ ಅರಣ್ಯ ಹಾಗೂ ನಿಸರ್ಗ ಮಂತ್ರಾಲಯದಿಂದ ಅಥವಾ ಭಾರತ ಸರ್ಕಾರ ಅಥವಾ ಕರ್ನಾಟಕ ಸರ್ಕಾರದ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯಿಂದ 'ಪರಿಸರ ಒಪ್ಪಿಗೆ' (ಇ.ಸಿ) ಪಡೆದುಕೊಳ್ಳಲು ಸೂಚಿಸಲಾಗಿದೆ. |

| | |
|---|---|
| ಪ್ರೋತ್ಸಾಹಕಗಳು ಹಾಗೂ ರಿಯಾಯಿತಿಗಳು | ರಾಜ್ಯದ ಐಟಿ (ಐ4) ನೀತಿಯಂತೆ, ಯೋಜನೆಯನ್ನು ಬೃಹತ್ ಯೋಜನೆ ಎಂದು ವರ್ಗೀಕರಿಸತಕ್ಕದ್ದು. |
| ಶಾಸನಬದ್ಧ ಪರವಾನಗಿಗಳು | ಪ್ರವರ್ತಕರುಗಳು ಅವಶ್ಯ ಶಾಸನಬದ್ಧ ಪರವಾನಗಿಗಳನ್ನು /ನಿರಾಕ್ಷೇಪಣ ಪತ್ರಗಳನ್ನು ಸಂಬಂಧಿಸಿದ ಇಲಾಖೆಗಳು / ಪ್ರಾಧಿಕಾರಗಳಿಂದ ಪಡೆಯುವುದು |
| ಸ್ಥಳೀಯ ಜನತೆಗೆ ಉದ್ಯೋಗ | ಡಾ: ಸರೋಜಿನಿ ಮಹಿಷಿ ವರದಿ ಹಾಗೂ ರಾಜ್ಯದ ಹೊಸ ಕೈಗಾರಿಕಾ ನೀತಿಯಂತೆ ಪ್ರವರ್ತಕರುಗಳು ಸ್ಥಳೀಯರಿಗೆ ಯೋಜನೆಗಳಲ್ಲಿ ಉದ್ಯೋಗ ಕಲ್ಪಿಸಿಕೊಡುವುದು. |

ಅ) ಯೋಜನೆ ಪ್ರತಿಪಾದಕರು ಮಳೆನೀರು ಕೊಯಿಲು, ತ್ಯಾಜ್ಯ ನೀರು ಪುನರ್ಬಳಕೆ ಹಾಗೂ ನೀರು ಸಂರಕ್ಷಣೆ ಸೌಲಭ್ಯಗಳನ್ನು ಅಳವಡಿತಕ್ಕದ್ದು. ಎಲ್ಲೆಲ್ಲಿ ಅವಶ್ಯವೋ ಅಲ್ಲಿ ಶೂನ್ಯ ತ್ಯಾಜ್ಯ ಸೌಲಭ್ಯವನ್ನು ಅಳವಡಿಸತಕ್ಕದ್ದು.

ಆ) ಹೂಡಿಕೆದಾರರು ಅವಶ್ಯವಾದ ಕಾನೂನಾತ್ಮಕ ಶಾಸನಬದ್ಧ ಒಪ್ಪಿಗೆಗಳನ್ನು ಮತ್ತು ಯೋಜನೆಗಳಿಗೆ ಸಂಬಂಧಪಟ್ಟ ಇಲಾಖೆಗಳಿಂದ ಹಾಗೂ ಸಕ್ಷಮ ಪ್ರಾಧಿಕಾರಗಳಿಂದ ನಿರಾಕ್ಷೇಪಣ ಪತ್ರವನ್ನು ಯೋಜನೆ ಅನುಷ್ಠಾನಗೊಳಿಸುವ ಮುನ್ನವೇ ಪಡೆಯತಕ್ಕದ್ದು.

ಇ) ಯೋಜನೆ ಪ್ರವರ್ತಕರು ಡಾ: ಸರೋಜಿನಿ ಮಹಿಷಿ ವರದಿಯಂತೆ ಹಾಗೂ ರಾಜ್ಯ ಸರ್ಕಾರದ ತತ್ಸಂಬಂಧ ನೀತಿಗಳಂತೆ ಸ್ಥಳೀಯ ಜನತೆಗೆ ತರಬೇತಿ ಮತ್ತು ಉದ್ಯೋಗ ಒದಗಿಸಲು ಮಾನವ ಸಂಪನ್ಮೂಲ ಅಭಿವೃದ್ಧಿಯ ಒಂದು ರೂಪುರೇಷೆಯನ್ನು ರಚಿಸಿ ಒದಗಿಸತಕ್ಕದ್ದು.

ಈ) ಎಲ್ಲೆಲ್ಲಿ ಕೆ.ಐ.ಎ.ಡಿ.ಬಿ. ಮೂಲಕ ಭೂ–ಸ್ವಾಧೀನ ಪ್ರಸ್ತಾಪವಿದೆಯೋ ಅಲ್ಲಿ, ಯೋಜನೆಯ ಪ್ರತಿಪಾದಕರು ಭೂಮಿಯನ್ನು ಕಳೆದುಕೊಳ್ಳುವ ಪ್ರತೀ ಕುಟುಂಬದ ಕನಿಷ್ಠ ಒಬ್ಬ ಸದಸ್ಯರಿಗೆ ಉದ್ಯೋಗ ನೀಡತಕ್ಕದ್ದು.

ಉ) ಎಲ್ಲೆಲ್ಲಿ ಯೋಜನೆಗೆ ಸ್ಥಳೀಯ ಮಾರಾಟಗಾರರಿಗೆ ಉತ್ತೇಜನದ ಅವಕಾಶವಿದೆಯೋ, ಅಲ್ಲಿ ಕಂಪನಿಯು ಮಾರಾಟ ಅಭಿವೃದ್ಧಿ ರೂಪುರೇಷೆ ರಚಿಸಿ, ಸ್ಥಳೀಯ ಮಾರಾಟಗಾರರುಗಳನ್ನು (VENDOR) ಉತ್ತೇಜಿಸಿ ಅವಶ್ಯವಾದ ಪರಿಕರಗಳು, ಉಪಕರಣಗಳು ಹಾಗೂ ಉಪಜೋಡಣೆಗಳನ್ನು ಈ ಸ್ಥಳೀಯ ಮಾರಾಟಗಾರರುಗಳಿಂದ ಖರೀದಿಸುವುದು.

ಊ) ಯೋಜನೆಯು ಅನುಮೋದನೆಗೊಂಡ ದಿನಾಂಕದಿಂದ 2 ವರ್ಷಗಳೊಳಗೆ ಅನುಷ್ಠಾನಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ

**ಸಿದ್ರಾಮಪ್ಪ ಹ ತಳವಾರ**

ಸರ್ಕಾರದ ಅಧೀನ ಕಾರ್ಯದರ್ಶಿ,
ಮಾಹಿತಿ ತಂತ್ರಜ್ಞಾನ, ಜೈವಿಕ ತಂತ್ರಜ್ಞಾನ
ಹಾಗೂ ವಿಜ್ಞಾನ ಮತ್ತು ತಂತ್ರಜ್ಞಾನ ಇಲಾಖೆ

**PR. 621**
**SC. 50**

## ಇಂಧನ ಸಚಿವಾಲಯ

**ವಿಷಯ:** 2015–16ನೇ ಸಾಲಿಗೆ ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ ಸಹಾಯಧನ ಹಾಗೂ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಮತ್ತು 2014–15ನೇ ಸಾಲಿನ ಬಾಕಿ ಸಹಾಯಧನ ಹಾಗೂ ಭಾಗ್ಯಜ್ಯೋತಿ / ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಎನ್ 145 ಪಿಎಸ್‌ಆರ್ 2004 ದಿನಾಂಕ 15.03.2005.
2. ಸರ್ಕಾರಿ ಆದೇಶ ಸಂಖ್ಯೆ: ಇಎನ್ 55 ಪಿಎಸ್‌ಆರ್ 2008 ದಿನಾಂಕ 04.09.2008.
3. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2013 ದಿನಾಂಕ 17.05.2013.
4. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015 ದಿನಾಂಕ 29.04.2015, 18.05.2015, 01.06.2015(TA), 04.06.2015 ಮತ್ತು 01.07.2015.
5. ಸರ್ಕಾರಿ ಆದೇಶ ಸಂಖ್ಯೆ: ಇಎನ್ 6 ಪಿಎಸ್‌ಆರ್ 2015/ಪಿ4 ದಿನಾಂಕ:22.06.2015(TA) ಮತ್ತು 21.07.2015(TA).
6. ಸರ್ಕಾರಿ ಆದೇಶ ಸಂಖ್ಯೆ: ಇಎನ್ 34 ಪಿಎಸ್‌ಆರ್ 2015 ದಿನಾಂಕ 22.06.2015.

**ಪ್ರಸ್ತಾವನೆ:**

1. ಮೇಲಿನ ಕ್ರಮಾಂಕ–1ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ "ಭಾಗ್ಯಜ್ಯೋತಿ/ಕುಟೀರಜ್ಯೋತಿ ವಿದ್ಯುತ್ ಸ್ಥಾವರ ಒಂದಕ್ಕೆ ಪ್ರತಿ ತಿಂಗಳು 18 ಯೂನಿಟ್‌ವರೆಗೆ ಮಾತ್ರ ಉಚಿತ ವಿದ್ಯುತ್ ಒದಗಿಸಲು (ನಿಗದಿಪಡಿಸಿದ ನಿಬಂಧನೆ ಮತ್ತು ಷರತ್ತಿಗೆ ಒಳಪಟ್ಟು) ಅನುಮೋದನೆ ನೀಡಲಾಗಿರುತ್ತದೆ.
2. ಮೇಲಿನ ಕ್ರಮಾಂಕ–2ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ [ಗೊತ್ತುಪಡಿಸಲಾದ ನಿಬಂಧನೆಗಳು ಮತ್ತು ಷರತ್ತುಗಳಿಗೊಳಪಟ್ಟು] ಮುಂದಿನ ಆದೇಶದವರೆಗೆ ದಿನಾಂಕ:01–08–2008ರಿಂದ ಜಾರಿಗೆ ಬರುವಂತೆ ರೈತರ 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕೆ ಸಂಬಂಧಿಸಿದಂತೆ ವಿದ್ಯುತ್ ಸರಬರಾಜು ಕಂಪನಿಗಳ ಬೇಡಿಕೆ ಮೊಬಲಗು ಸರ್ಕಾರದಿಂದ ಮರುಪಾವತಿಸುವುದಕ್ಕೆ ಅನುಮೋದನೆ ನೀಡಲಾಗಿರುತ್ತದೆ.
3. ಮೇಲಿನ ಕ್ರಮಾಂಕ–3ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕರ್ನಾಟಕ ರಾಜ್ಯದಲ್ಲಿ ದಿನಾಂಕ 13.05.2013ಕ್ಕೆ ಬಾಕಿ ಇದ್ದ ಭಾಗ್ಯಜ್ಯೋತಿ / ಕುಟೀರಜ್ಯೋತಿ ಸ್ಥಾವರಗಳ ದಂಡ ಸಹಿತ ವಿದ್ಯುತ್ ಬಾಕಿ ಶುಲ್ಕ ರೂ 319.61 ಕೋಟಿಗಳನ್ನು ಮನ್ನಾ ಮಾಡಲಾಗಿದೆ. ಇದರಲ್ಲಿ 2014–15ನೇ

ಸಾಲಿನಲ್ಲಿ ರೂ 213.07 ಕೋಟಿಗಳನ್ನು ಬಿಡುಗಡೆ ಮಾಡಲಾಗಿದೆ. 2015–16ನೇ ಸಾಲಿಗೆ ರೂ. 106.54 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಕ್ರಮಾಂಕ–(4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ರೂ. 35.52 ಕೋಟಿಗಳನ್ನು ಬಿಡುಗಡೆ ಮಾಡಲಾಗಿದ್ದು, ಬಾಕಿ ಉಳಿದಿರುವ ರೂ. 71.02 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

4. ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗವು 2015ರ ದರ ಆದೇಶದಲ್ಲಿ 2015–16ನೇ ಸಾಲಿಗೆ ರೂ 7197.16 ಕೋಟಿಗಳ ಸಹಾಯಧನವನ್ನು ನಿಗದಿಪಡಿಸಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ 2015–16ನೇ ಸಾಲಿನ ಜುಲೈ 2015ರವರೆಗೆ ಸಹಾಯಧನ ರೂ. 2,001.56 ಕೋಟಿಗಳನ್ನು ಬಿಡುಗಡೆ ಮಾಡಿದೆ.

ಆಯೋಗದ ದರ ಆದೇಶ 2013ರಲ್ಲಿ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ರೂ. 443.49 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 21.40 ಕೋಟಿಗಳನ್ನು ಬಿಡುಗಡೆ ಮಾಡಿದೆ. ಇನ್ನು ರೂ. 422.09 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ.

2014–15ನೇ ಸಾಲಿನ ಬಾಕಿ ಸಹಾಯಧನ ರೂ. 408.56 ಕೋಟಿಗಳನ್ನು ಬಿಡುಗಡೆ ಮಾಡಬೇಕಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ರೂ. 42.64 ಕೋಟಿಗಳನ್ನು ಬಿಡುಗಡೆ ಮಾಡಿದ್ದು, ಇನ್ನು ರೂ. 365.92 ಕೋಟಿಗಳ ಬಾಕಿ ಬಿಡುಗಡೆ ಮಾಡಬೇಕಾಗಿದೆ.

5. 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ 375.00 ಕೋಟಿಗಳನ್ನು, 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಹಾಗೂ 2014–15ನೇ ಸಾಲಿನ ಬಾಕಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ ರೂ 16.01 ಕೋಟಿಗಳನ್ನು ಮತ್ತು ಭಾಗ್ಯಜ್ಯೋತಿ/ಕುಟಿರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ ರೂ 8.88 ಕೋಟಿಗಳನ್ನು ಬಿಡುಗಡೆ ಮಾಡಲು ಆರ್ಥಿಕ ಇಲಾಖೆ ಟಿಪ್ಪಣಿ ಸಂಖ್ಯೆ:ಎಫ್‌ಡಿ 996 ವೆಚ್ಚ–1/2015 ದಿನಾಂಕ 28.07.2015ರಲ್ಲಿ ಸಹಮತಿ ನೀಡಿದೆ.

6. ವಿದ್ಯುತ್ ಸರಬರಾಜು ಕಂಪನಿಗಳು ಭಾಗ್ಯಜ್ಯೋತಿ/ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುವುದಕ್ಕಾಗಿ 2015–16ನೇ ಸಾಲಿನ ಆಯವ್ಯಯ ಸವಿವರ ವೆಚ್ಚದ ಅಂದಾಜುಗಳು ಸಂಪುಟ–7ರ ಪುಟ ಸಂಖ್ಯೆ–78ರಲ್ಲಿ ಲೆಕ್ಕಶೀರ್ಷಿಕೆ "2801-80-101-1-04-106 ಸಹಾಯಧನ (ಯೋಜನೇತರ)"ದ ಅಡಿಯಲ್ಲಿ ರೂ.7498.00 ಕೋಟಿಗಳನ್ನು ಒದಗಿಸಲಾಗಿದೆ. ಇದರಲ್ಲಿ ಮೇಲೆ ಓದಲಾದ ಕ್ರಮಾಂಕ–(4), (5) ಮತ್ತು (6)ರಲ್ಲಿನ ಸರ್ಕಾರಿ ಆದೇಶಗಳಲ್ಲಿ ಒಟ್ಟು ರೂ. 2,001.56 ಕೋಟಿಗಳನ್ನು ಬಿಡುಗಡೆ ಮಾಡಿದೆ. ವಿವರ ಈ ಕೆಳಕಂಡಂತಿದೆ.

**ರೂ ಕೋಟಿಗಳು**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ 7197.16 ಕೋಟಿಗಳಲ್ಲಿ ನಗದು ರೂಪವಾಗಿ ನೀರಾವರಿ ಪಂಪುಸೆಟ್ಟು, ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಉಚಿತ ವಿದ್ಯುತ್ ಸರಬರಾಜಿಗಾಗಿ ಸಹಾಯಧನದ ಬಾಬ್ತು | 1,600.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಹಾಗೂ 2014–15ನೇ ಸಾಲಿನ ಸಹಾಯಧನ ಬಾಬ್ತು. | 64.04 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು. | 35.52 |
| ತ್ರಿಪಕ್ಷೀಯ ಹೊಂದಾಣಿಕೆ – ಏಪ್ರಿಲ್ 2015ರಿಂದ ಜೂನ್ 2015ರ ಮಾಹೆಯವರೆಗೆ ವಿದ್ಯುತ್ ತೆರಿಗೆ ವಸೂಲಿ ಮತ್ತು ರಾಜಧನ ಬಾಬ್ತು | 300.00 |
| ಸಹಾಯ ಧನದ ರೂಪದಲ್ಲಿ ಶ್ರೀ ಸತ್ಯ ಸಾಯಿ ಆಸ್ಪತ್ರೆಯ ವಿದ್ಯುತ್ ಬಿಲ್ಲಿನ ಬಾಬ್ತನ್ನು ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿಗೆ ಬಿಡುಗಡೆ ಮಾಡಿದೆ. | 2.00 |
| ಜುಲೈ–2015ರವರೆಗೆ ಬಿಡುಗಡೆ ಮಾಡಿರುವ ಒಟ್ಟು ಮೊತ್ತ. | **2,001.56** |

7. ಆಗಸ್ಟ್ 2015ರ ಮಾಹೆಗೆ ಸಹಾಯಧನ, ಬಾಕಿ ಹಾಗೂ ಹೆಚ್ಚುವರಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಮರುಪಾವತಿ ಮೊತ್ತಗಳನ್ನು ಈ ಕೆಳಕಂಡಂತೆ ಬಿಡುಗಡೆ ಮಾಡಲು ಪ್ರಸ್ತಾಪಿಸಿದೆ.

**ರೂ ಕೋಟಿಗಳು**

| | |
|---|---|
| 2015–16ನೇ ಸಾಲಿಗೆ ಆಯೋಗ ಅನುಮೋದಿಸಿರುವ ರೂ 7197.16 ಕೋಟಿಗಳ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 375.00 |
| 2011–12ನೇ ಸಾಲಿನ ಹೆಚ್ಚುವರಿ ಸಹಾಯಧನದ ಬಾಬ್ತು ಪ್ರತಿ ಮಾಹೆಯಾನ | 16.01 |
| ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಪ್ರತಿ ಮಾಹೆಯಾನ | 8.88 |
| ಆಗಸ್ಟ್ 2015ರ ಮಾಹೆಗೆ ಒಟ್ಟು ಬಿಡುಗಡೆ | 399.89 |

ಅದರಂತೆ ಪ್ರಸ್ತುತ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ ಇಎನ್ 6 ಪಿಎಸ್‌ಆರ್ 2015, ಬೆಂಗಳೂರು, ದಿನಾಂಕ 03.08.2015**

1. ಸರ್ಕಾರವು ಭಾಗ್ಯಜ್ಯೋತಿ / ಕುಟೀರಜ್ಯೋತಿ ಮತ್ತು 10ಹೆಚ್‌ಪಿವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ ಉಚಿತ ವಿದ್ಯುತ್ ಸರಬರಾಜು ಮಾಡುತ್ತಿರುವುದಕ್ಕಾಗಿ 2015–16ನೇ ಸಾಲಿನ ಆಗಸ್ಟ್ 2015ರ ಮಾಹೆಗೆ ರೂ. 375.00 ಕೋಟಿಗಳ (ರೂ. ಮುನ್ನೂರ ಎಪ್ಪತ್ತೈದು ಕೋಟಿಗಳು ಮಾತ್ರ) ಸಹಾಯಧನವನ್ನು ವಿದ್ಯುತ್ ಸರಬರಾಜು ಕಂಪನಿಗಳಿಗೆ ಲೆಕ್ಕಶೀರ್ಷಿಕೆ "2801-80-101-1-04-106" (ಸಹಾಯಧನ) (ಯೋಜನೇತರ)ಅಡಿಯಲ್ಲಿ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ. ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | 10ಹೆಚ್‌ಪಿ ವರೆಗಿನ ನೀರಾವರಿ ಪಂಪ್‌ಸೆಟ್ ವಿದ್ಯುತ್ ಸ್ಥಾವರಗಳಿಗೆ | ಭಾಗ್ಯ ಜ್ಯೋತಿ/ ಕುಟೀರ ಜ್ಯೋತಿ ಸ್ಥಾವರಗಳಿಗೆ | 2015–16ರ ಆಗಸ್ಟ್ ಮಾಹೆಗೆ ಬಿಡುಗಡೆ |
|---|---|---|---|
| ಬೆವಿಕಂ | 26.00 | 1.00 | 27.00 |
| ಮವಿಕಂ | 25.00 | 1.00 | 26.00 |
| ಹುವಿಕಂ | 153.00 | 2.00 | 155.00 |
| ಗುವಿಕಂ | 87.00 | 2.00 | 89.00 |
| ಚಾವಿಸನಿನಿ | 71.00 | 1.00 | 72.00 |
| ಹು.ಗ್ರಾ.ಸ.ಸಂ | 6.00 | 0.00 | 6.00 |
| **ಒಟ್ಟು** | **368.00** | **7.00** | **375.00** |

2. 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು ರೂ 16.01 ಕೋಟಿಗಳನ್ನು ಆಗಸ್ಟ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ ಕೋಟಿಗಳಲ್ಲಿ

| ವಿಸಕಂಗಳು | 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು |
|---|---|
| ಬೆವಿಕಂ | 1.00 |
| ಮವಿಕಂ | 1.00 |
| ಹುವಿಕಂ | 0.00 |
| ಗುವಿಕಂ | 6.91 |
| ಚಾವಿಸನಿನಿ | 7.10 |
| **ಒಟ್ಟು** | **16.01** |

3. ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ರೂ 8.88 ಕೋಟಿಗಳನ್ನು ಆಗಸ್ಟ್ 2015ರ ಮಾಹೆಗೆ ಈ ಕೆಳಕಂಡಂತೆ ಬಿಡುಗಡೆ ಮಾಡಿ ಆದೇಶಿಸಿದೆ.

ರೂ ಕೋಟಿಗಳಲ್ಲಿ

| ವಿಸಕಂಗಳು | ಒಟ್ಟು |
|---|---|
| ಬೆವಿಕಂ | 2.50 |
| ಮವಿಕಂ | 1.00 |
| ಹುವಿಕಂ | 2.00 |
| ಗುವಿಕಂ | 0.50 |
| ಚಾವಿಸನಿನಿ | 2.88 |
| **ಒಟ್ಟು** | **8.88** |

4. ಮೇಲಿನ ಆದೇಶ ಭಾಗದ ಕಂಡಿಕೆ 1, 2 ಮತ್ತು 3ರಲ್ಲಿ ಬಿಡುಗಡೆ ಮಾಡಿರುವ ಸಹಾಯಧನ, ಹೆಚ್ಚುವರಿ ಸಹಾಯಧನ, ಬಾಕಿ ಸಹಾಯಧನ ಮತ್ತು ಭಾಗ್ಯಜ್ಯೋತಿ/ಕುಟೀರಜ್ಯೋತಿ ಬಾಕಿ ಮನ್ನಾ ಬಾಬ್ತು ಸಹಾಯಧನವನ್ನು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ ಹಾಗೂ ವಿದ್ಯುತ್ ಸರಬರಾಜು ಕಂಪನಿಗಳಿಗೆ ಈ ಕೆಳಕಂಡಂತೆ ಮರುಹಂಚಿಕೆ ಮಾಡಿ ಆದೇಶಿಸಿದೆ.

ರೂ ಕೋಟಿಗಳಲ್ಲಿ

| ವಿದ್ಯುತ್ ಸರಬರಾಜು ಕಂಪನಿಗಳು | ಆಗಸ್ಟ್ 2015ರ ಮಾಹೆಗೆ ಸಹಾಯಧನ ಬಿಡುಗಡೆ | | | ಆಗಸ್ಟ್ 2015ರ ಮಾಹೆಗೆ 2011–12ನೇ ಸಾಲಿನ ಹೆಚ್ಚುವರಿ ಸಹಾಯಧನ ಬಾಬ್ತು ವಿಸಕಂಗಳಿಗೆ ಬಿಡುಗಡೆ | ಭಾ.ಜ್ಯೋ/ಕು.ಜ್ಯೋ ಬಾಕಿ ಮನ್ನಾ ಬಾಬ್ತು ಆಗಸ್ಟ್ 2015 ರ ಮಾಹೆಗೆ | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂ ಗಳಿಗೆ | ಒಟ್ಟು |
|---|---|---|---|---|---|---|---|---|
| | ವಿಸಕಂಗಳ ಪರವಾಗಿ ಕವಿನಿನಿಗೆ | ವಿಸಕಂಗಳಿಗೆ | ಒಟ್ಟು | | | | | |
| ಬೆವಿಕಂ | 27.00 | 0.00 | **27.00** | * 1.00 | * 2.50 | 30.50 | 0.00 | **30.50** |
| ಮವಿಕಂ | 26.00 | 0.00 | **26.00** | * 1.00 | * 1.00 | 28.00 | 0.00 | **28.00** |
| ಹುವಿಕಂ | 107.00 | 48.00 | **155.00** | 0.00 | 2.00 | 107.00 | 50.00 | **157.00** |

